| ಕ್ರ. ಸಂ. | ಸಾರ್ವಜನಿಕ ಪ್ರಾಧಿಕಾರಗಳ ಕಛೇರಿಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|
| 1 | 2 | 3 | 4 |
| 1. | ಪ್ರವಾಸೋದ್ಯಮ ಆಯುಕ್ತರ ಕಛೇರಿ, ನಂ.49, 2ನೇ ಮಹಡಿ, ಖನಿಜಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು. ಪ್ರವಾಸಿ ಮಾಹಿತಿ ಕೇಂದ್ರ, ಬೆಂಗಳೂರು ವಿಮಾನ ನಿಲ್ದಾಣ ಹಾಗೂ ರೈಲು ನಿಲ್ದಾಣ. ಪ್ರವಾಸಿ ಮಾಹಿತಿ ಕಛೇರಿ, ಕೋಲಾರ. ಪ್ರವಾಸಿ ಮಾಹಿತಿ ಕೇಂದ್ರ, ತುಮಕೂರು. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಆಯುಕ್ತರ ಕಛೇರಿ, ನಂ.49, 2ನೇ ಮಹಡಿ, ಖನಿಜಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು. | ಪ್ರವಾಸೋದ್ಯಮ ಆಯುಕ್ತರು. |
| 2. | ಪ್ರಾದೇಶಿಕ ಪ್ರವಾಸಿ ಕಛೇರಿ, ಸಾರ್ವಜನಿಕ ಉದ್ಯಾನವನ, ಗುಲ್ಬರ್ಗಾ.<br>ಪ್ರವಾಸಿ ಮಾಹಿತಿ ಕೇಂದ್ರ, ಬೀದರ್.<br>ಪ್ರವಾಸಿ ಮಾಹಿತಿ ಕೇಂದ್ರ, ರಾಯಚೂರು.<br>ಪ್ರವಾಸಿ ಮಾಹಿತಿ ಕೇಂದ್ರ, ಬಸವಕಲ್ಯಾಣ. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಸಾರ್ವಜನಿಕ ಉದ್ಯಾನವನ, ಗುಲ್ಬರ್ಗಾ. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |
| 3. | ಪ್ರಾದೇಶಿಕ ಪ್ರವಾಸಿ ಕಛೇರಿ, ಬಿಜಾಪುರ.<br>ಪ್ರವಾಸಿ ಮಾಹಿತಿ ಕೇಂದ್ರ, ಬೆಳಗಾಂ. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಬಿಜಾಪುರ. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |
| 4. | ಪ್ರಾದೇಶಿಕ ಪ್ರವಾಸಿ ಕಛೇರಿ, ಬಾಗಲಕೋಟೆ, ಪ್ರವಾಸಿ ಮಾಹಿತಿ ಕಛೇರಿ, ಧಾರವಾಡ, ಪ್ರವಾಸಿ ಮಾಹಿತಿ ಕಛೇರಿ, ಬಾದಾಮಿ, ಪ್ರವಾಸಿ ಮಾಹಿತಿ ಕಛೇರಿ, ಐಹೊಳೆ. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಬಾಗಲಕೋಟೆ. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |
| 5. | ಪ್ರಾದೇಶಿಕ ಪ್ರವಾಸಿ ಕಛೇರಿ, ಮೈಸೂರು,<br>ಪ್ರವಾಸಿ ಮಾಹಿತಿ ಕಛೇರಿ, ಮಡಿಕೇರಿ,<br>ಪ್ರವಾಸಿ ಮಾಹಿತಿ ಕಛೇರಿ, ಮಂಡ್ಯ. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಮೈಸೂರು. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |
| 6. | ಪ್ರಾದೇಶಿಕ ಪ್ರವಾಸಿ ಕಛೇರಿ, ಚಾಮರಾಜನಗರ. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಚಾಮರಾಜನಗರ. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |
| 7. | ಪ್ರಾದೇಶಿಕ ಪ್ರವಾಸಿ ಕಛೇರಿ, ಹಾಸನ,<br>ಪ್ರವಾಸಿ ಮಾಹಿತಿ ಕಛೇರಿ, ಶ್ರವಣಬೆಳಗೊಳ,<br>ಪ್ರವಾಸಿ ಮಾಹಿತಿ ಕಛೇರಿ, ಬೇಲೂರು ಹಳೇಬೀಡು,<br>ಪ್ರವಾಸಿ ಮಾಹಿತಿ ಕಛೇರಿ, ಚಿಕ್ಕಮಗಳೂರು. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಹಾಸನ. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |
| 8. | ಪ್ರಾದೇಶಿಕ ಪ್ರವಾಸಿ ಕಛೇರಿ, ಹೊಸಪೇಟೆ,<br>ಪ್ರವಾಸಿ ಮಾಹಿತಿ ಕಛೇರಿ, ಹಂಪಿ,<br>ಪ್ರವಾಸಿ ಮಾಹಿತಿ ಕಛೇರಿ, ಗದಗ. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಹೊಸಪೇಟೆ. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |
| 9. | ಪ್ರಾದೇಶಿಕ ಪ್ರವಾಸಿ ಕಛೇರಿ, ಶಿವಮೊಗ್ಗ,<br>ಪ್ರವಾಸಿ ಮಾಹಿತಿ ಕಛೇರಿ, ಚಿತ್ರದುರ್ಗ,<br>ಪ್ರವಾಸಿ ಮಾಹಿತಿ ಕಛೇರಿ, ಜೋಗ್‌ಜಲಪಾತ. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಶಿವಮೊಗ್ಗ. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |
| 10. | ಪ್ರಾದೇಶಿಕ ಪ್ರವಾಸಿ ಕಛೇರಿ, ಉಡುಪಿ,<br>ಪ್ರವಾಸಿ ಮಾಹಿತಿ ಕಛೇರಿ, ಮಂಗಳೂರು,<br>ಪ್ರವಾಸಿ ಮಾಹಿತಿ ಕಛೇರಿ, ಬಜ್ಪೆ ವಿಮಾನ ನಿಲ್ದಾಣ, ಮಂಗಳೂರು. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಉಡುಪಿ. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |
| 11. | ಪ್ರಾದೇಶಿಕ ಪ್ರವಾಸಿ ಕಛೇರಿ, ಕಾರವಾರ,<br>ಪ್ರವಾಸಿ ಮಾಹಿತಿ ಕಛೇರಿ, ಪಣಜಿ-ಗೋವಾ,<br>ಪ್ರವಾಸಿ ಮಾಹಿತಿ ಕಛೇರಿ, ಬನವಾಸಿ. | ಸಹಾಯಕ ನಿರ್ದೇಶಕರು, ಪ್ರಾದೇಶಿಕ ಪ್ರವಾಸಿ ಕಛೇರಿ, ಕಾರವಾರ. | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು. |

ಪಿ.ಆರ್.477

ಪ್ರವಾಸೋದ್ಯಮ ಆಯುಕ್ತರು.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು, ದೊಡ್ಡಬ್ಯಾಲ್ಲಾಳು ಗ್ರಾಮದಲ್ಲಿ ಬ್ಲಾಕ್ ಗ್ರಾನೈಟ್‌ಗಾಗಿ ಶ್ರೀಮತಿ ಎಲ್.ಕೆ. ಕಮಲಜಾಮ್ಮಣಿ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 553ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:** (1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ: ಕಗಗು 553: 2004-05, 6805 ದಿನಾಂಕ: 09.03.2005.

(2) ಹಿರಿಯ ಭೂವಿಜ್ಞಾನಿ, ಮೈಸೂರು, ರವರ ಪತ್ರ ಸಂಖ್ಯೆ: ಗಭೂಇ: ಭೂವಿಮೈ: ಆಡಿಟ್: ಕಗಗು 553: 2005-06 3153, ದಿನಾಂಕ: 10.08.2005.

**ಪ್ರಸ್ತಾವನೆ:**

ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು, ದೊಡ್ಡಬ್ಯಾಲ್ಲಾಳು ಗ್ರಾಮದ ಸರ್ವೆ ನಂ. 202 ರಲ್ಲಿ ಶ್ರೀಮತಿ ಎಲ್.ಕೆ. ಕಮಲಜಾಮ್ಮಣಿ ರವರಿಗೆ 5.00 ಎಕರೆಗೆ ದಿನಾಂಕ: 23.10.2002 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2005ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.2,55,378/- ಗಳನ್ನು ಪಾವತಿ ಗುತ್ತಿಗೆ ನಿಷ್ಕ್ರಿಯಗೊಳಿಸಿರುವ ಬಗ್ಗೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸ್‌ಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಸರ್ಕಾರದ ಅಧಿಸೂಚನೆIII ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 02.07.1994ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

### ಆದೇಶ

### ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 554: 2005-06/ 13575, ದಿನಾಂಕ:7ನೇ ಫೆಬ್ರವರಿ, 2006

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು, ದೊಡ್ಡಬ್ಯಾಲ್ಲಾಳು ಗ್ರಾಮದ ಸರ್ವೆ ನಂ.202ರಲ್ಲಿ 5.00 ಎಕರೆಗೆ ಬ್ಲಾಕ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 553ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ಪಿ.ಆರ್.478 ನಿರ್ದೇಶಕರು.

## ಕಂದಾಯ ಇಲಾಖೆ

### ಅಧಿಸೂಚನೆ

### ಸಂಖ್ಯೆ: ಕಂಇ 31 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ:25ನೇ ಜನವರಿ, 2006

ಕೊನಗವಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಕೊನಗವಳ್ಳಿ: ಇವರು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕಿನ ಕೊನಗವಳ್ಳಿ ಗ್ರಾಮದ ಸರ್ವೆ ನಂ.9ರಲ್ಲಿ 3 ಎಕರೆ 28 ಗುಂಟೆ ಜಮೀನನ್ನು ವಿವಿಧ ಬಗೆಯ ಹಸಿರು ಮೇವಿನ ಗಿಡಗಳ ಪ್ರದರ್ಶನದ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ಮತ್ತು 15ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ರವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ ಸಿಆರ್ 193/ 2000-01 ದಿನಾಂಕ: 27.01.2005 ಮತ್ತು 27.09.2005ರ ಪ್ರಸ್ತಾಪಿತ ಮೇಲ್ಕಂಡ ಗ್ರಾಮದ ಸರ್ವೆ ನಂಬರ್ 9ರಲ್ಲಿ ಒಟ್ಟು 3 ಎಕರೆ 28 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1-ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ. ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ಕಾರಣಗಳನ್ನು ದಾಖಲಿಸಿ, ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯ್ತಿ ನೀಡಲು ಸದರಿ ಅಧಿನಿಯಮದ ಕಲಂ 109(1-ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1-ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು 1996ರ ನಿಯಮ 38-ಬಿ ಮತ್ತು 28-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79-ಎ, 79ಬಿ, ಅಥವಾ 80ಕ್ಕೆ ವಿನಾಯ್ತಿ ನೀಡಿ ಕೊನಗವಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಕೊನಗವಳ್ಳಿ: ಇವರು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕಿನ ಕೊನಗವಳ್ಳಿ ಗ್ರಾಮದ ಸರ್ವೆ ನಂ.9ರಲ್ಲಿ 3 ಎಕರೆ 28 ಗುಂಟೆ ಜಮೀನನ್ನು ವಿವಿಧ ಬಗೆಯ ಹಸಿರು ಮೇವಿನ ಗಿಡಗಳ ಪ್ರದರ್ಶನದ ಉದ್ದೇಶಕ್ಕಾಗಿ ಭೂ ಮಾಲೀಕರಿಂದ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1-ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸತಕ್ಕದ್ದು. ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪೆನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರಕ್ಕೆ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ./ ಓ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು, ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರಕ್ಕೆ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109 ರನ್ವಯ ವಿನಾಯ್ತಿ ನೀಡಲು ಶಿಫಾರಸ್ಸು ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆ ಅಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸುಧಾರಣೆ).

ಪಿ.ಆರ್.480

## ಅಧಿಸೂಚನೆ

## ಸಂಖ್ಯೆ: ಕಂಇ 85 ಎಲ್ಆರ್ಎಂ 2005, ಬೆಂಗಳೂರು, ದಿನಾಂಕ:25ನೇ ಜನವರಿ, 2006

ಮೆ: ಡೆಲ್ವಿನ ಪವರ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು: ಇವರು ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕಿನ ಪಾಲವ್ವನಹಳ್ಳಿ ಗ್ರಾಮದ ಸರ್ವೆ ನಂ. 28/1 ರಲ್ಲಿ 45.00 ಎಕರೆ, 28/ 2ಪಿ2 ರಲ್ಲಿ 10 ಎಕರೆ 30 ಗುಂಟೆ, 28/ 2ಪಿ5 ರಲ್ಲಿ 3 ಎಕರೆ 30 ಗುಂಟೆ, 28/ 2ಪಿ7 ರಲ್ಲಿ 3 ಎಕರೆ 30 ಗುಂಟೆ, 28/3 ರಲ್ಲಿ 43 ಎಕರೆ 03 ಗುಂಟೆ, 28/ 2ಪಿ3 ರಲ್ಲಿ 11 ಎಕರೆ 30 ಗುಂಟೆ, 28/ 2ಪಿ4 ರಲ್ಲಿ 3 ಎಕರೆ 30 ಗುಂಟೆ, 28/ 2ಪಿ1 ರಲ್ಲಿ 7.00 ಎಕರೆ ಮತ್ತು 28/ 2ಪಿ6ರಲ್ಲಿ 3 ಎಕರೆ 30 ಗುಂಟೆ ಹೀಗೆ ಒಟ್ಟು: 132 ಎಕರೆ 23 ಗುಂಟೆ ಜಮೀನನ್ನು ಪವರ್ ವಿದ್ಯುತ್ ಕೇಂದ್ರ ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ಮತ್ತು 15ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ರವರು ತಮ್ಮ ಪತ್ರ ಸಂಖ್ಯೆ: ಎಲ್ಎನ್ಡಿ/ ಸಿಆರ್ 47/ 2005-06 ದಿನಾಂಕ: 15.07.2005ರ ಪ್ರಸ್ತಾಪಿತ ಮೇಲ್ಕಂಡ ಗ್ರಾಮದ ಸರ್ವೆ ನಂಬರ್‌ಗಳಲ್ಲಿ ಒಟ್ಟು 132 ಎಕರೆ 23 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1-ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ. ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಠ ಜಾತಿ: ಪರಿಶಿಷ್ಠ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 790ಬಿ ಅಥವಾ 80ರ ಅವಕಾಶಗಳಿಂದ ವಿನಾಯ್ತಿ ನೀಡಲು ಸದರಿ ಅಧಿನಿಯಮದ ಕಲಂ 109(1-ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1-ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79-ಎ, 79ಬಿ, ಅಥವಾ 80ಕ್ಕೆ ವಿನಾಯ್ತಿ ನೀಡಿ ಮೆ: ಡೆಲ್ವಿನ ಪವರ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು: ಇವರು ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕಿನ ಪಾಲವ್ವನಹಳ್ಳಿ ಗ್ರಾಮದ ಸರ್ವೆ ನಂ. 28/1 ರಲ್ಲಿ 45.00 ಎಕರೆ, 28/2ಪಿ2 ರಲ್ಲಿ 10 ಎಕರೆ 30 ಗುಂಟೆ, 28/ 2ಪಿ5 ರಲ್ಲಿ 3 ಎಕರೆ 30 ಗುಂಟೆ, 28/ 2ಪಿ7 ರಲ್ಲಿ 3 ಎಕರೆ 30 ಗುಂಟೆ, 28/3 ರಲ್ಲಿ 43 ಎಕರೆ 03 ಗುಂಟೆ, 28/ 2ಪಿ3 ರಲ್ಲಿ 11 ಎಕರೆ 30 ಗುಂಟೆ, 28/ 2ಪಿ4 ರಲ್ಲಿ 3 ಕೆರೆ 30 ಗುಂಟೆ, 28/ 2ಪಿ1 ರಲ್ಲಿ 7.00 ಎಕರೆ ಮತ್ತು 28/ 2ಪಿ6 ರಲ್ಲಿ 3 ಎಕರೆ 30 ಗುಂಟೆ ಹೀಗೆ ಒಟ್ಟು: 132 ಎಕರೆ 23 ಗುಂಟೆ ಜಮೀನನ್ನು ಪವರ್ ವಿದ್ಯುತ್ ಕೇಂದ್ರ ಸ್ಥಾಪಿಸುವ ಉದ್ದೇಶಕ್ಕಾಗಿ ಭೂ ಮಾಲೀಕರಿಂದ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1-ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸತಕ್ಕದ್ದು. ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪೆನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ./ ಓ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು, ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರಕ್ಕೆ ನಿಹಿತ ಮಾಡಿಕೊಳ್ಳಲಾಗುವುದು.
7. ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109 ರನ್ವಯ ವಿನಾಯ್ತಿ ನೀಡಲು ಶಿಫಾರಸ್ಸು ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆ ಅಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸುಧಾರಣೆ).

ಪಿ.ಆರ್.481

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಠ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಕೋಲಾರ
## ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಎಫ್.ಸಿ.01/ 2006

| ಅರ್ಜಿದಾರರು: | | ಪ್ರತಿವಾದಿ: |
|---|---|---|
| 1) ಶ್ರೀಮತಿ ಲೀಲಾವತಿ @ ಲೀಲಮ್ಮ 35 ವರ್ಷ, ಕೋಂ ಲೇಟ್ ಎಂ. ಮಂಜುನಾಥ್.<br>2) ಕು: ಎಂ. ವಿದ್ಯಾ, 12 ವರ್ಷ, ತಂದೆ: ಲೇಟ್ ಮಂಜುನಾಥ್.<br>3) ಮಾ: ಎಂ. ಅರವಿಂದ್, 9 ವರ್ಷ, ಬಿನ್ ಲೇಟ್ ಮಂಜುನಾಥ್, ಚಿಕ್ಕತಿರುಪತಿ ವಿಲೇಜ್, ಲಕ್ಕೂರು ಹೋಬಳಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ. | ವಿರುದ್ಧ | ವಿಭಾಗೀಯ ನಿಯಂತ್ರಣಾಧಿಕಾರಿಗಳು,<br>ಕೆ.ಎಸ್.ಆರ್.ಟಿ.ಸಿ. ಕೋಲಾರ ಡಿಪೋ, ಕೋಲಾರ. |

### ಅಧಿಸೂಚನೆ

ಅರ್ಜಿದಾರರಾದ ಶ್ರೀಮತಿ ಲೀಲಾವತಿ @ ಲೀಲಮ್ಮ ಅವರು ತಮ್ಮ ಪತಿ ಎಂ. ಮಂಜುನಾಥ್ ಅವರು ಪ್ರತಿವಾದಿಯಾದ ಕೆ.ಎಸ್.ಆರ್.ಟಿ.ಸಿ.ಯ ಅಧೀನದ ಮಾಲೂರು ಡಿಪೋದಲ್ಲಿ ಚಾಲಕ ಆಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 24.06.2004ರಂದು ಹೃದಯಾಘಾತಕ್ಕೆ ಒಳಗಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯೂ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:31.01.2006 ರಂದು ನೀಡಲಾಗಿದೆ.

**ಕೃಷ್ಣಪ್ಪ**
ಕಾರ್ಮಿಕ ನಷ್ಠ ಪರಿಹಾರ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್.482

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಠ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಕೋಲಾರ
## ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಎಫ್.ಸಿ.02/ 2006

| ಅರ್ಜಿದಾರರು: | | ಪ್ರತಿವಾದಿ: |
|---|---|---|
| 1) ಶ್ರೀ ಎಸ್.ಟಿ. ಶ್ರೀನಿವಾಸಯ್ಯ ಬಿನ್ ತಿಮ್ಮರಾಯಪ್ಪ.<br>2) ಶ್ರೀಮತಿ ರಾಮಲಕ್ಷ್ಮಮ್ಮ @ ಲಕ್ಷ್ಮಿದೇವಮ್ಮ ಕ್ಯಾಗತ್ತೂರು, ಯದರೂರು (ಅಂ) ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ. | ವಿರುದ್ಧ | 1) ಕೋಲಾರ ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ ನಿ., ಕೋಲಾರ ಡೈರಿ, ರಾಷ್ಟ್ರೀಯ ಹೆದ್ದಾರಿ, ಹುತ್ತೂರು ಅಂಚೆ, ಕೋಲಾರ.<br>2) ವೇಣು ಎಂಟರ್‌ಪ್ರೈಸಸ್, ಗುತ್ತಿಗೆದಾರರು, ಕೋಲಾರ. |

### ಅಧಿಸೂಚನೆ

ಪ್ರತಿವಾದಿಗಳಾದ ವೇಣು ಎಂಟರ್‌ಪ್ರೈಸಸ್, ರವರು ಕೋಲಾರ ಡೈರಿಯಲ್ಲಿ ಕಾರ್ಮಿಕನಾಗಿದ್ದ ಶ್ರೀ ಎಸ್. ಸತೀಶ್ ರವರು ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 13.01.2006ರಂದು ಡೇರಿಯಲ್ಲಿ ಆದ ಅಪಘಾತಕ್ಕೀಡಾಗಿ ತೀವ್ರವಾಗಿ ಗಾಯಗೊಂಡು ಸದರಿ ಗಾಯಗಳ ದೆಸೆಯಿಂದ ದಿನಾಂಕ: 17.01.2006ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ ಆ ಪ್ರಯುಕ್ತ ಮೃತನ ವಾರಸುದಾರರಾದ ಮೇಲ್ಕಂಡ ಅರ್ಜಿದಾರರಿಗೆ ಪರಿಹಾರ ವಿತರಿಸುವಂತೆ ಕೋರಿ ಪರಿಹಾರದ ಮೊತ್ತವನ್ನು ಈ ನ್ಯಾಯಾಲಯದಲ್ಲಿ ಠೇವಣಿ ಮಾಡಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಇನ್ನಿತರೆ ಯಾವುದೇ ರೀತಿಯೂ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:31.01.2006 ರಂದು ನೀಡಲಾಗಿದೆ.

**ಕೃಷ್ಣಪ್ಪ**
ಕಾರ್ಮಿಕ ನಷ್ಠ ಪರಿಹಾರ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್.483

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಠ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಕೋಲಾರ
## ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಎಫ್.ಸಿ.03/ 2006

| ಅರ್ಜಿದಾರರು: | | ಪ್ರತಿವಾದಿ: |
|---|---|---|
| 1) ಶ್ರೀಮತಿ ಸುರೇಖ ಕೋಂ ಲೇಟ್ ಸುರೇಶ ಬಾಬು.<br>2) ಸುರೇಶ್‌ಬಾಬು ರವರ 8 ತಿಂಗಳ ಮಗಳು (ಹೆಸರಿಟ್ಟಿರುವುದಿಲ್ಲ)<br>3) ಶ್ರೀಮತಿ ತಿಪ್ಪಮ್ಮ ಕೋಂ ನಾರಾಯಣಪ್ಪ ಪಳಾರಹಳ್ಳಿ ವಿಲೇಜ್, ಹುದುಕುಳ ಅಂಚೆ, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ. | ವಿರುದ್ಧ | 1) ಕೋಲಾರ ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ ನಿ., ಕೋಲಾರ ಡೈರಿ, ರಾಷ್ಟ್ರೀಯ ಹೆದ್ದಾರಿ, ಹುತ್ತೂರು ಅಂಚೆ, ಕೋಲಾರ.<br>2) ವೇಣು ಎಂಟರ್‌ಪ್ರೈಸಸ್, ಗುತ್ತಿಗೆದಾರರು, ಕೋಲಾರ. |

**ಅಧಿಸೂಚನೆ**

ಪ್ರತಿವಾದಿಗಳಾದ ವೇಣು ಎಂಟರ್‌ಪ್ರೈಸಸ್, ರವರು ಕೋಲಾರ ಡೈರಿಯಲ್ಲಿ ಕಾರ್ಮಿಕನಾಗಿದ್ದ ಶ್ರೀ ಸುರೇಶ್ ಬಾಬು ರವರು ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 13.01.2006ರಂದು ಡೇರಿಯಲ್ಲಿ ಆದ ಅಪಘಾತಕ್ಕೀಡಾಗಿ ತೀವ್ರವಾಗಿ ಗಾಯಗೊಂಡು ಸದರಿ ಗಾಯಗಳ ದೆಸೆಯಿಂದ ದಿನಾಂಕ: 18.01.2006ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ವಾರಸುದಾರರಾದ ಮೇಲ್ಕಂಡ ಅರ್ಜಿದಾರರಿಗೆ ಪರಿಹಾರ ವಿತರಿಸುವಂತೆ ಕೋರಿ ಪರಿಹಾರದ ಮೊತ್ತವನ್ನು ಈ ನ್ಯಾಯಾಲಯದಲ್ಲಿ ಠೇವಣಿ ಮಾಡಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:31.01.2006 ರಂದು ನೀಡಲಾಗಿದೆ.

**ಕೃಷ್ಣಪ್ಪ**

ಪಿ.ಆರ್.484

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

**ಜಿಲ್ಲಾ ಖಜಾನಾಧಿಕಾರಿಯವರ ಕಛೇರಿ, ಮಡಿಕೇರಿ**

**ಪ್ರಕಟಣೆ ಸಂಖ್ಯೆ: ಜಿ.ಖ.ಮ./ ಸಿಬ್ಬಂದಿ/ 05-06/ 252, ದಿನಾಂಕ: 25ನೇ ಜನವರಿ, 2006**

**ವಿಷಯ:** ನಾಪೋಕ್ಲು ಉಪಖಜಾನೆಯಲ್ಲಿ ಧನಾದೇಶ ಪದ್ಧತಿ ಜಾರಿಗೆ ತರುವ ಬಗ್ಗೆ.

**ಉಲ್ಲೇಖ:** (1) ಸರ್ಕಾರಿ ಆದೇಶ ಸಂಖ್ಯೆ: ಎಫ್.ಡಿ. 92. ಆ.ಖಖಿ. ಬೆಂಗಳೂರು ದಿನಾಂಕ: 24.01.2006.

(2) ಮಾನ್ಯ ಖಜಾನೆ ನಿರ್ದೇಶಕರ ಪತ್ರ ಸಂಖ್ಯೆ: ಖನಿ/ ಪ್ರಕ್ರಿಯೆ/ 05.02.2003.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ದಿನಾಂಕ: 28.09.1978 ರಿಂದ 31.01.2006 ರವರೆಗೆ ಕೊಡಗು ಜಿಲ್ಲೆ ಮಡಿಕೇರಿ ಜಿಲ್ಲಾ ಖಜಾನೆಯ ಉಪ ಖಜಾನೆ ನಾಪೋಕ್ಲುವಿನಲ್ಲಿ ನಾನ್- ಬ್ಯಾಂಕಿಂಗ್ ಮಾದರಿಯ ಖಜಾನೆ ಕಾರ್ಯ ನಿರ್ವಹಿಸಲಾಗುತ್ತಿತ್ತು.

ಉಲ್ಲೇಖ (1)ರಲ್ಲಿ ನಮೂದಿಸಿದ ಸರ್ಕಾರಿ ಆದೇಶದಲ್ಲಿ ಮಡಿಕೇರಿ ಜಿಲ್ಲಾ ಖಜಾನೆಯ ಅಧೀನದ ನಾಪೋಕ್ಲು ಉಪ ಖಜಾನೆಯಲ್ಲಿ ಬ್ಯಾಂಕಿಂಗ್ ಉಪಖಜಾನೆಯನ್ನಾಗಿ ಪರಿವರ್ತಿಸಿ ಧನಾದೇಶ ಪದ್ಧತಿಯನ್ನು ಜಾರಿಗೆ ತರುವಂತೆ ಆದೇಶ ನೀಡಿದೆ.

ಉಲ್ಲೇಖ (2)ರಲ್ಲಿ ನಮೂದಿಸಿದ ಮಾನ್ಯ ಖಜಾನೆ ನಿರ್ದೇಶಕರ ಆದೇಶದಲ್ಲಿ ದಿನಾಂಕ: 01.02.2005 ರಿಂದ ಜಾರಿಗೆ ಬರುವಂತೆ ನಾಪೋಕ್ಲು ಉಪಖಜಾನೆಯ ನಗದು ವ್ಯವಹಾರವನ್ನು ನಾಪೋಕ್ಲಿನ ಕೆನರಾ ಬ್ಯಾಂಕ್ ಶಾಖೆಗೆ ವರ್ಗಾಯಿಸಿ ಧನಾದೇಶ ಪದ್ಧತಿಯನ್ನು ಜಾರಿಗೆ ತರುವಂತೆ ನಿರ್ದೇಶನ ನೀಡಿದ ಮೇರೆಗೆ ಈ ಅಧಿಸೂಚನೆಯನ್ನು ಹೊರಡಿಸಲಾಗಿದೆ.

ಈ ಮೇಲಿನ ಆದೇಶಗಳ ಪ್ರಕಾರ ದಿನಾಂಕ: 01.02.2006 ರಿಂದ ನಾಪೋಕ್ಲು ಉಪ ಖಜಾನೆಯಲ್ಲಿನ ನಗದು ವ್ಯವಹಾರವನ್ನು ರದ್ದುಪಡಿಸಿ ಧನಾದೇಶ ಪದ್ಧತಿಯನ್ನು ಜಾರಿಗೆ ಗೊಳಿಸುವುದರೊಂದಿಗೆ ಏಜನ್ಸಿ ಬ್ಯಾಂಕ್ ಆಗಿರುವ ನಾಪೋಕ್ಲಿನ ಕೆನರಾ ಬ್ಯಾಂಕ್ ಶಾಖೆಗೆ ವ್ಯವಹಾರವನ್ನು ವರ್ಗಾಯಿಸಲಾಗಿದೆ. ಇನ್ನು ಮುಂದೆ 01.02.2006 ನಂತರ ಎಲ್ಲಾ ಡ್ರಾಯಿಂಗ್ ಅಧಿಕಾರಿಗಳು ಮತ್ತು ಪಿಂಚಣಿದಾರರಿಗೆ ಧನಾದೇಶ ನೀಡಲಾಗುವುದು. ಹಾಗೂ ಕೆನರಾ ಬ್ಯಾಂಕ್ ನಾಪೋಕ್ಲುವಿನಲ್ಲಿ ಪಾವತಿ ಮತ್ತು ಜಮೆಗೆ ವ್ಯವಸ್ಥೆಯನ್ನು ಮಾಡಲಾಗಿದೆ ಎಂದು ಈ ಮೂಲಕ ತಿಳಿಯಪಡಿಸಿದೆ.

ಹಣ ಜಮೆ ಮಾಡುವ ಸಂದರ್ಭದಲ್ಲಿ 12 ಅಂಕಿಗಳ ಲೆಕ್ಕ ಶೀರ್ಷಿಕೆಯನ್ನು ನಮೂದಿಸಿ ಉಪಖಜಾನಾಧಿಕಾರಿಗಳ ಮೇಲು ಸಹಿಯನ್ನು ದೃಢೀಕರಿಸಿರುವುದನ್ನು ಖಚಿತಪಡಿಸಿಕೊಂಡು ಜಮೆ ಮಾಡಿಕೊಳ್ಳು ಬ್ಯಾಂಕ್ ಅಧಿಕಾರಿಯವರಿಗೆ ಸೂಚಿಸಿದೆ.

ಪಿ.ಆರ್.485

ಜಿಲ್ಲಾ ಖಜಾನಾಧಿಕಾರಿ, ಮಡಿಕೇರಿ.

**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆನಾಸ 19 ಕಾಮಾಸೇ, 2003, ಬೆಂಗಳೂರು, ದಿನಾಂಕ:13ನೇ ಫೆಬ್ರವರಿ, 2006**

**ವಿಷಯ:** ದಿನಾಂಕ: 01.01.2006ರಲ್ಲಿದ್ದಂತೆ ಕಾನೂನು ಮಾಪನಶಾಸ್ತ್ರ ಇಲಾಖೆಯ ಉಪನಿಯಂತ್ರಕರುಗಳ ರಿಕ್ತ ಸ್ಥಾನ ವಹಿ. ದಿನಾಂಕ: 30.06.92 ರಿಂದ ಪ್ರಾರಂಭವಾಗಿ ದಿನಾಂಕ: 30.06.2004ರವರೆಗೆ.

ಮೇಲ್ಕಂಡ ರಿಕ್ತ ಸ್ಥಾನಗಳ ವಹಿಯ ಒಂದು ಛಾಯಾ ಪ್ರತಿಯನ್ನು ಕಾನೂನು ಮಾಪನಶಾಸ್ತ್ರ ಇಲಾಖೆಯ ನಿಯಂತ್ರಕರ ಕಛೇರಿಯಲ್ಲಿ ಮತ್ತು ಪೀಠಾಧಿಕಾರಿಗಳು, ಆಹಾರ-1 ಶಾಖೆ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಸಚಿವಾಲಯದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಅದರಿಂದ ಬಾಧಿತರಾಗುವ ಎಲ್ಲಾ ವ್ಯಕ್ತಿಗಳ ವೀಕ್ಷಣೆಗೆ ಇಡಲಾಗಿದೆ.

2. ವಹಿಯಲ್ಲಿ ದಾಖಲಾಗಿರುವ ಮಾಹಿತಿಯಿಂದ ಬಾಧಿತರಾಗುವವರು ಈ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದರೆ ಅಂತಹ ಆಕ್ಷೇಪಣೆಗಳನ್ನು ಲಿಖಿತ ರೂಪದಲ್ಲಿ ಆ ಆಕ್ಷೇಪಣೆಗಳನ್ನು ಪುಷ್ಟೀಕರಿಸುವ ದಾಖಲೆಗಳೊಂದಿಗೆ ಪ್ರಧಾನ ಕಾರ್ಯದರ್ಶಿಗಳು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, 7ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ಸಲ್ಲಿಸಬಹುದು.

3. ಮೇಲೆ ನಿಗದಿಪಡಿಸಿದ ಅವಧಿಯ ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-1 ಶಾಖೆ,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

## ರಿಕ್ತ ಸ್ಥಾನಗಳ ರಿಜಿಸ್ಟರ್

ಹುದ್ದೆಯ ಪದನಾಮ ಮತ್ತು ವೇತನ ಶ್ರೇಣಿ: ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರು ರೂ.9580-14200 (1999ರ ವೇತನ ಶ್ರೇಣಿ)

ನೇಮಕಾತಿ ಪ್ರಾಧಿಕಾರದ ಪದನಾಮ: ಕರ್ನಾಟಕ ರಾಜ್ಯ ಸರ್ಕಾರ

ಭರ್ತಿ ಮಾಡಬೇಕಾಗಿರುವ ಶೇಕಡಾವಾರು ರಿಕ್ತ ಸ್ಥಾನಗಳು: ನೇರ ನೇಮಕಾತಿ- ಇಲ್ಲ, ನಿಯೋಜನೆ- ಇಲ್ಲ, ಮುಂಬಡ್ತಿ - 100 ಶೇಕಡಾ

| ರಿಕ್ತ ಸ್ಥಾನ ಸಂಖ್ಯೆ | ರಿಕ್ತ ಬಿದ್ದ ದಿನಾಂಕ | ಭರ್ತಿ ಮಾಡಬೇಕಾದ ವಿಧಾನ ನೇರ ನೇಮಕಾತಿ: ಮುಂಬಡ್ತಿ: ನಿಯೋಜನೆ | ನೇರ ನೇಮಕಾತಿಯ ರಿಕ್ತಸ್ಥಾನ ಮೀಸಲಿಲ್ಲದದು; ಮೀಸಲಿರುವುದು- ಪ.ಜಾ: ಪ.ಪಂ: ಜಿಎಂ: ಬಿಸಿಎಂ: ಬಿಎಸ್‌ಜಿ: ಬಿಸಿಟಿ: ಬಿಟಿ | ಆಯ್ಕೆ ಪ್ರಾಧಿಕಾರಕ್ಕೆ ರಿಕ್ತಸ್ಥಾನಗಳನ್ನು ಸೂಚಿಸಿದ ದಿನಾಂಕ | ಮುಂಬಡ್ತಿ ರಿಕ್ತ ಸ್ಥಾನ + ಮೀಸಲಿಲ್ಲದದು/ ಮೀಸಲಿರುವುದು ಪ.ಜಾ/ ಪ.ಪಂ. | ನೇಮಕಾತಿ ಆದೇಶದ ಸಂಖ್ಯೆ ಮತ್ತು ದಿನಾಂಕ | ಭರ್ತಿ ಮಾಡಿದ ದಿನಾಂಕ | ಭರ್ತಿ ಮಾಡಿದ ವಿಧಾನ-ನೇರ ನೇಮಕಾತಿ/ ಮುಂಬಡ್ತಿ/ ನಿಯೋಜನೆ | ನೇಮಕಾತಿ ಹೊಂದಿದ ಅಭ್ಯರ್ಥಿ ಹೆಸರು ಮತ್ತು ಮುಂಬಡ್ತಿ/ ನೇಮಕಾತಿ ಆದೇಶದಲ್ಲಿ ಕ್ರಮ ಸಂಖ್ಯೆ ಶ್ರೀಮತಿ: ಶ್ರೀಯುತರಾದ | ನೇಮಕಾತಿ ಹೊಂದಿದ ಅಭ್ಯರ್ಥಿ ಪ.ಜಾ/ ಪ.ಪಂ./ ಜಿಎಂ/ ಬಿಸಿಎಂ/ ಬಿಎಸ್‌ಜಿ/ ಬಿಸಿಟಿ/ ಬಿಟಿ | ಮೀಸಲಾತಿಯಂತೆ ಮಾಡುವುದರಲ್ಲಿ ಏನಾದರೂ ವಿಚಲಿಸಿದೆಯೇ | ಹುಟ್ಟಿದ ದಿನಾಂಕ | ಷರಾ |
|---|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 1 | 11 | 12 | 13 | 14 |
| 1. | 30.6.92 | ಮುಂಬಡ್ತಿ | - | - | ಮುಂಬಡ್ತಿ | ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಸಿಎಸ್ 139 ಎಲ್‌ಎಂಇ 1992, ದಿನಾಂಕ: 25.3.1995 | 25.3.1995 | ಮುಂಬಡ್ತಿ | ಎಸ್.ಜಿ. ರವಿ ಕುಮಾರ್ | ಪ.ಪಂ. | - | 5.9.1949 | |
| 2. | 30.6.94 | ಮುಂಬಡ್ತಿ | - | - | ಮುಂಬಡ್ತಿ | ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಸಿಎಸ್ 139 ಎಲ್‌ಎಂಇ 1992, ದಿನಾಂಕ: 25.3.1995 | 25.3.1995 | ಮುಂಬಡ್ತಿ | ಪಿ.ವಿ. ಮನೋಹರನ್ | ಪ.ಜಾ. | - | 10.4.1952 | - |
| 3. | 6.9.95 | ಮುಂಬಡ್ತಿ | - | - | ಮುಂಬಡ್ತಿ | ಸರ್ಕಾರದ ಅಧಿಸೂಚನೆ ಸಂಖ್ಯೆ: ಆನಾಸ 120 ಕಾಮಾಸೇ 2000, ದಿನಾಂಕ: 7.4.2003 | 7.4.2003 | ಮುಂಬಡ್ತಿ | ಸಿ.ಎಂ.ಮಲ್ಲಿಕಾರ್ಜುನ್ | ಜಿ.ಎಂ. | - | 18.6.1953 | - |
| 4. | 31.8.96 | ಮುಂಬಡ್ತಿ | - | - | ಮುಂಬಡ್ತಿ | ಸರ್ಕಾರದ ಅಧಿಸೂಚನೆ ಸಂಖ್ಯೆ: ಆನಾಸ 120 ಕಾಮಾಸೇ 2000, ದಿನಾಂಕ: 7.4.2003 | 7.4.2003 | ಮುಂಬಡ್ತಿ | ಮೊಹಮದ್ ಜಹಾಂಗೀರ್ | ಬಿ.ಸಿ.ಎಂ. | - | 12.6.1952 | - |
| 5. | 31.10.98 | ಮುಂಬಡ್ತಿ | - | - | ಮುಂಬಡ್ತಿ | ಸರ್ಕಾರದ ಅಧಿಸೂಚನೆ ಸಂಖ್ಯೆ: ಆನಾಸ 120 ಕಾಮಾಸೇ 2000, ದಿನಾಂಕ: 7.4.2003 | 7.4.2003 | ಮುಂಬಡ್ತಿ | ಮೊಹಮದ್ ಜಹಾಂಗೀರ್ | ಜಿ.ಎಂ. | - | 5.8.1955 | - |
| 6. | 30.6.04 | ಖಾಲಿ | - | - | - | - | - | - | - | - | - | - | - |

**ಎ.ಎಸ್. ವಿಶ್ವೇಶ್ವರಯ್ಯ**
ಪೀಠಾಧಿಕಾರಿ, ಆಹಾರ-1 ಶಾಖೆ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್.498

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ**
**ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು – ೫೬೦ ೦೦೧**

**ವಿಷಯಃ** ಶ್ರೀ ಬಿ.ಕೆ.ಮಂಜುನಾಥ್, ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಉಡುಪಿ ಜಿಲ್ಲೆ, ಇವರ ಅನಧಿಕೃತ ಗೈರುಹಾಜರಿ ಮತ್ತು ದುರ್ನಡತೆಗೆ ಸಂಬಂಧಿಸಿದಂತೆ ಶಿಸ್ತು ಕ್ರಮ ಜರುಗಿಸುವ ಕುರಿತು.

**ಓದಲಾಗಿದೆಃ**

೧ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ ಕರಾಆಃಆಡಳಿತಃ೧೧ಃ ೨೦೦೩-೦೪ ದಿನಾಂಕ ೨೨-೦೬-೨೦೦೫.

೨ ಉಡುಪಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಪತ್ರ ಸಂಖ್ಯೆಃ ಉಜಿಗ್ರಾವೇಃ ಸಿಬ್ಬಂದಿಃಸಿಆರ್-೧೬ಃ೨೦೦೪ ದಿನಾಂಕ ೧೨-೧೨-೨೦೦೫.

೩ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಆದೇಶ ಸಂಖ್ಯೆ ಕರಾಆಃಆಡಳಿತಃದ್ವಿದಸಃ೩೮ಃ ೨೦೦೪ ದಿನಾಂಕ ೧೯-೧೨-೨೦೦೫. [ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೦(೧)(a)ರನ್ವಯದ ಅಮಾನತ್ತಿನ ಆದೇಶ]

೪ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ತಿಳುವಳಿಕೆ ಸಂಖ್ಯೆ ಕರಾಆಃಆಡಳಿತಃದ್ವಿದಸಃ ೩೮ಃ೨೦೦೪ ದಿನಾಂಕ ೨೩-೦೧-೨೦೦೬ [ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೧(೪)ರ ಅನ್ವಯ].

೫ ಶ್ರೀ ಬಿ.ಕೆ.ಮಂಜುನಾಥ್, ಉಡುಪಿ ಜಿಲ್ಲಾ ವೇದಿಕೆ, ಇವರ ಮನವಿ ದಿನಾಂಕ ೦೬-೦೨-೦೬.

೬ ರಾಜ್ಯ ಆಯೋಗದ ಆದೇಶ ಸಂಖ್ಯೆ ಕರಾಆಃಆಡಳಿತಃದ್ವಿದಸಃ೩೮ಃ೨೦೦೪ ದಿನಾಂಕ ೨೧-೦೨-೨೦೦೬.

೭ ಶ್ರೀ ಎ.ಎಂ.ಬೆನ್ನೂರ್, ಅಧ್ಯಕ್ಷರು, ಬೆಂಗಳೂರು ನಗರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಇವರ ಇಲಾಖಾ ವಿಚಾರಣಾ ವರದಿ ದಿನಾಂಕ ೨೫-೦೩-೨೦೦೬.

೮ ಶ್ರೀ ಬಿ.ಕೆ. ಮಂಜುನಾಥ್, ಇವರ ಮನವಿ ದಿನಾಂಕ ೨೮-೦೩-೨೦೦೬.

೯ ಕರ್ನಾಟಕ ರಾಜ್ಯ ಆಯೋಗದ ತಿಳುವಳಿಕೆ ಸಂಖ್ಯೆ ಕರಾಆಃಆಡಳಿತಃ೩೮ಃ೨೦೦೪ ದಿನಾಂಕ ೩೧-೦೩-೨೦೦೬ (ಕರ್ನಾಟಕ ನಾಗರೀಕ ಸೇವಾ (ನಿ.ವ.ಮೇ.) ನಿಯಮಗಳು ೧೯೫೭ರ ನಿಯಮ ೧೨(a)ರ ಅನ್ವಯ).

೧೦ ಶ್ರೀ ಬಿ.ಕೆ. ಮಂಜುನಾಥ್, ಇವರ ಮನವಿ ದಿನಾಂಕ ೦೮-೦೪-೨೦೦೬.

**ಪ್ರಸ್ತಾವನೆಃ**

ಶ್ರೀ ಬಿ.ಕೆ. ಮಂಜುನಾಥ್, ದ್ವಿತೀಯ ದರ್ಜೆ ಸಹಾಯಕ, ಈತ ದಿನಾಂಕ ೦೧-೦೭-೧೯೮೪ರ ಪೂರ್ವದಲ್ಲಿ ದಿನಗೂಲಿ ನೌಕರನಾಗಿ ರೇಷ್ಮೆ ಇಲಾಖೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿ, ಉಪನಿರ್ದೇಶಕರು, ರೇಷ್ಮೆ ಇಲಾಖೆ, ಚಿಕ್ಕಬಳ್ಳಾಪುರ, ಇವರ ಅಧಿಕೃತ ಜ್ಞಾಪನ ಸಂಖ್ಯೆ ಇಎಸ್‌ಟಿಃಎಂಆರ್ಎಃಪಿಟಿಃ೨೦ಃ೮೬-೮೭ ದಿನಾಂಕ ೩೦-೦೧-೧೯೮೭ರ ಅನ್ವಯ ದಿನಗೂಲಿಯಿಂದ ಮಾಸಿಕ ನೌಕರನಾಗಿ ಪರಿವರ್ತನೆಗೊಂಡು, ರೇಷ್ಮೆ ನಿರ್ದೇಶನಾಲಯದ ದಿನಾಂಕ ೨೯-೦೭-೧೯೯೧ರ ಆದೇಶ ಸಂಖ್ಯೆ ಇಎಸ್‌ಟಿಃ೧೦ಎಫ್ಃ ಡಿಡಬ್ಲ್ಯೂಃ೧ಃ೧೯೯೦-೯೧ರ ಅನ್ವಯ ದಿನಾಂಕ ೦೧-೦೧-೧೯೯೦ ರಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ ಡಿಪಿಎಆರ್ಃ೨ಃಎಸ್ಎಲ್ಸಿಃ೯೦ ದಿನಾಂಕ ೦೬-೦೮-೧೯೯೦ರ ಅನ್ವಯ ಮಾಸಿಕ ನೌಕರಿಯಿಂದ ಸರ್ಕಾರಿ ನೌಕರನನ್ನಾಗಿ ಖಾಯಂಗೊಳಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ ಸಿಆಸುಇಃ೧೧ಃಸೇಸ್ಥಆಃ೯೨ ದಿನಾಂಕ ೦೮-೦೯-೧೯೯೨ ಹಾಗೂ ೨೩-೧೦-೧೯೯೨ರ ಅನ್ವಯ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ತಮ್ಮ ಅಧಿಕೃತ ಜ್ಞಾಪನ ಸಂಖ್ಯೆ ಇಎಸ್‌ಟಿಃಸಿಆರ್ಃದಿ.ನೌಃ೧ಃ೨೦೦೩-೦೪ ದಿನಾಂಕ ೩೧-೦೩-೨೦೦೪ರ ಅಡಿಯಲ್ಲಿ ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ಖಾಲಿಯಿರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನಿಯೋಜಿಸುವ ಸಲುವಾಗಿ ಮರುವಿನ್ಯಾಸಿಸಿದ್ದು, ಸದರಿ ಮರುವಿನ್ಯಾಸದ ಆದೇಶವನ್ನು ಅನುಸರಿಸಿಕೊಂಡು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ ಕರಾಆಃಆಡಳಿತಃ೨೨ಃ೧೯೯೮-೯೯ (ಭಾಗ-೨) ದಿನಾಂಕ ೨೦-೦೫-೨೦೦೩ರನ್ವಯ ಶ್ರೀ ಬಿ.ಕೆ.ಮಂಜುನಾಥ್ ಇವರನ್ನು ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ಖಾಲಿ ಇದ್ದ ಉಡುಪಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ಮರುವಿನ್ಯಾಸಿಸಿ ನಿಯೋಜಿಸಲಾಗಿರುತ್ತದೆ. ಈ ನಿಯೋಜನೆಯ ಆದೇಶವನ್ನು ಅನುಸರಿಸಿಕೊಂಡು, ಶ್ರೀ ಬಿ.ಕೆ. ಮಂಜುನಾಥ್ ಇವರು ದಿನಾಂಕ ೧೦-೦೬-೨೦೦೪ರ ಪೂರ್ವಾಹ್ನದಿಂದ ಉಡುಪಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಕರ್ತವ್ಯದಲ್ಲಿರುತ್ತಾರೆ.

ದಕ್ಷಿಣ ಕನ್ನಡ ಜಿಲ್ಲಾ ವೇದಿಕೆಯಲ್ಲಿ ಕೆಲಸದ ಒತ್ತಡ ಜಾಸ್ತಿ ಇದ್ದು, ಸದರಿ ವೇದಿಕೆಯಲ್ಲಿ ಒಬ್ಬರು ದ್ವಿತೀಯ ದರ್ಜೆ ಸಹಾಯಕರಿದ್ದುದರಿಂದ ಮತ್ತು ಉಡುಪಿ ಜಿಲ್ಲಾ ವೇದಿಕೆಯಲ್ಲಿ ಇಬ್ಬರು ದ್ವಿತೀಯ ದರ್ಜೆ ಸಹಾಯಕರಿದ್ದು ಕೆಲಸದ ಒತ್ತಡ ಕಡಿಮೆ ಇದ್ದುದರಿಂದ, ಸಾರ್ವಜನಿಕ ಹಿತದೃಷ್ಟಿಯಿಂದ ದಕ್ಷಿಣ ಕನ್ನಡ ಜಿಲ್ಲಾ ವೇದಿಕೆಯ ಕೆಲಸದ ಒತ್ತಡವನ್ನು ಕಡಿಮೆ ಮಾಡುವ ದೃಷ್ಟಿಯಿಂದ ಶ್ರೀ ಬಿ.ಕೆ. ಮಂಜುನಾಥ್, ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಉಡುಪಿ ಜಿಲ್ಲೆ, ಇವರನ್ನು ಅನ್ಯ ಕರ್ತವ್ಯದ ಮೇರೆಗೆ ಕರ್ನಾಟಕ ರಾಜ್ಯ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ ಕರಾಆಃಆಡಳಿತಃ೧೧ಃ೨೦೦೩-೦೪

ದಿನಾಂಕ ೨೨-೦೬-೨೦೦೫ರ ಅನ್ವಯ ದಕ್ಷಿಣ ಕನ್ನಡ ಜಿಲ್ಲಾ ವೇದಿಕೆಗೆ ನಿಯೋಜಿಸಲಾಗಿರುತ್ತದೆ. ಈ ನಿಯೋಜನೆಯ ಅನ್ವಯ ಶ್ರೀ ಬಿ.ಕೆ. ಮಂಜುನಾಥ್ ಇವರು ಉಡುಪಿ ಜಿಲ್ಲಾ ವೇದಿಕೆಯಿಂದ ಬಿಡುಗಡೆಯಾಗಿ ದಕ್ಷಿಣ ಕನ್ನಡ ಜಿಲ್ಲಾ ವೇದಿಕೆಯಲ್ಲಿ ಅನ್ಯ ಕರ್ತವ್ಯದ ಸೇವೆಯಲ್ಲಿ ಸಾರ್ವಜನಿಕ ಹಿತದೃಷ್ಠಿಯಿಂದ ಕಾರ್ಯನಿರ್ವಹಿಸಬೇಕಾಗಿರುತ್ತದೆ. ಆದರೆ, ಶ್ರೀ ಬಿ.ಕೆ. ಮಂಜುನಾಥ್ ಇವರು ಯಾವುದೇ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸದೇ, ವೈದ್ಯಕೀಯ ಕಾರಣಗಳ ಮೇಲೆ ದಿನಾಂಕ ೧೭-೦೬-೨೦೦೫ರಿಂದ ದಿನಾಂಕ ೦೪-೦೭-೨೦೦೫ರವರೆಗೆ ರಜೆಯನ್ನು ಪಡೆದಿದ್ದು, ದಿನಾಂಕ ೦೫-೦೭-೨೦೦೫ರಿಂದ ವೈದ್ಯಕೀಯ ಚಿಕಿತ್ಸೆ ಬಗ್ಗೆ ದಾಖಲೆಗಳನ್ನು ಹಾಜರುಪಡಿಸಿ ರಜೆಯನ್ನು ಮಂಜೂರು ಮಾಡಿಸಿಕೊಳ್ಳುವುದು ನಿಯಮಾನುಸಾರ ಅವಶ್ಯವಿದ್ದರೂ ಕೂಡ, ದಿನಾಂಕ ೦೫-೦೭-೨೦೦೫ರಿಂದ ದಿನಾಂಕ ೧೯-೧೨-೨೦೦೫ರವರೆಗೆ ರಜೆಯನ್ನು ಮಂಜೂರು ಮಾಡಿಸಿಕೊಂಡಿರುವುದಿಲ್ಲ ಮತ್ತು ಆ ಅವಧಿಯಲ್ಲಿ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ ಹಾಗೂ ಅನಧಿಕೃತ ಗೈರುಹಾಜರಾಗಿ ಕರ್ತವ್ಯ ನಿಷ್ಠೆ ಇಲ್ಲದಿರುವುದನ್ನು ತೋರ್ಪಡಿಸಿರುವುದಲ್ಲದೇ, ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ದುರ್ನಡತೆಯನ್ನೆಸಗಿ ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಗಳು ೧೯೬೬ರ ನಿಯಮ ೩ರ ಉಪನಿಯಮ ೧ರ ೨ ಮತ್ತು ೩ನೇ ಖಂಡಗಳನ್ನು ಉಲ್ಲಂಘಿಸಿರುತ್ತಾರೆ ಮತ್ತು ಶ್ರೀ ಬಿ.ಕೆ. ಮಂಜುನಾಥ್ ಇವರು ದಕ್ಷಿಣ ಕನ್ನಡ ಜಿಲ್ಲಾ ವೇದಿಕೆಯಲ್ಲಿ ಅನ್ಯ ಕರ್ತವ್ಯದ ನಿಯೋಜನೆಯ ಕಾರ್ಯನಿರ್ವಹಣೆಯಿಂದ ತಪ್ಪಿಸಿಕೊಳ್ಳುವ ಸಲುವಾಗಿ ದಕ್ಷಿಣ ಕನ್ನಡ ಜಿಲ್ಲಾ ವೇದಿಕೆಗೆ ದ್ವಿತೀಯ ದರ್ಜೆ ಸಹಾಯಕರ ಸೇವೆ ಅಗತ್ಯವಿದ್ದರೂ ಕೂಡ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ದಿನಾಂಕ ೨೨-೦೬-೨೦೦೫ರ ಆದೇಶದ ಅನ್ವಯ ಕಾರ್ಯನಿರ್ವಹಿಸಲು ಹಿಂಜರಿದಿರುವುದಲ್ಲದೇ ಸದರಿ ಆದೇಶವನ್ನು ಇದುವರೆಗೆ ಪಾಲಿಸಿರುವುದಿಲ್ಲ ಮತ್ತು ಉಡುಪಿ ಜಿಲ್ಲಾ ವೇದಿಕೆಯಿಂದ ಮತ್ತು ಕರ್ನಾಟಕ ರಾಜ್ಯ ಆಯೋಗದಿಂದ ಹಲವಾರು ರೀತಿಯ ಸೂಚನೆ ನೀಡಿದ್ದಾಗ್ಯೂ ಕೂಡ ದಿನಾಂಕ ೧೯-೧೨-೨೦೦೫ರ ಹಾಗೂ ೨೪-೧೨-೨೦೦೫ರ ಮನವಿಯಲ್ಲಿ ಉದ್ಧಟತನದಿಂದ ವರ್ತಿಸಿದ್ದಲ್ಲದೇ, ತಮ್ಮ ಸೇವೆಯನ್ನು ಕರ್ನಾಟಕ ಸರ್ಕಾರಿ ಸಚಿವಾಲಯಕ್ಕೆ ನೀಡುವಂತೆ ರಾಜಕೀಯ ಒತ್ತಡವನ್ನೂ ತರಲು ಪ್ರಯತ್ನಿಸಿರುತ್ತಾರೆ. ಹೀಗೆ ಶ್ರೀ ಬಿ.ಕೆ.ಮಂಜುನಾಥ್ ಮಾಡಿರುವುದು ಸರ್ಕಾರಿ ಸೇವೆಯಲ್ಲಿ ನಿಷ್ಠೆ ಇಲ್ಲದಿರುವುದನ್ನು ತೋರ್ಪಡಿಸಿರುವುದಲ್ಲದೇ, ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ದುರ್ನಡತೆಯನ್ನೆಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು ೧೯೬೬ರ ೩ನೇ ನಿಯಮದ ೧ನೇ ಉಪನಿಯಮದ ೧, ೨ ಮತ್ತು ೩ನೇ ಖಂಡಗಳನ್ನು ಉಲ್ಲಂಘಿಸಿರುತ್ತಾರೆ. ಈ ಎರಡು ಆರೋಪಗಳಿಗೆ ಸಂಬಂಧಿಸಿದಂತೆ ಸಮಜಾಯಿಷಿಯನ್ನು ನೀಡುವಂತೆ ದಿನಾಂಕ ೨೩-೦೧-೨೦೦೬ರ ತಿಳುವಳಿಕೆ ಮೂಲಕ ಶ್ರೀ ಬಿ.ಕೆ.ಮಂಜುನಾಥ್ ಇವರಿಗೆ ತಿಳಿಸಲಾಗಿ, ಸದರಿ ನೌಕರರು ದಿನಾಂಕ ೦೬-೦೨-೨೦೦೬ರ ಮನವಿಯಲ್ಲಿ ಆರೋಪಗಳನ್ನು ತಳ್ಳಿಹಾಕುವಂತಹ ಯಾವುದೇ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ ಹಾಗೂ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲವಾದ್ದರಿಂದ, ಈ ಎರಡು ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಂಡು ಶಿಸ್ತು ಕ್ರಮ ಜರುಗಿಸುವ ಸಲುವಾಗಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ದಿನಾಂಕ ೨೧-೦೨-೨೦೦೬ರ ಆದೇಶದ ಅಡಿಯಲ್ಲಿ ಶ್ರೀ ಎ.ಎಂ.ಬೆನ್ನೂರ್, ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಬೆಂಗಳೂರು ನಗರ ಜಿಲ್ಲೆ, ಇವರನ್ನು ಇಲಾಖಾ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ.

ಶ್ರೀ ಎ.ಎಂ.ಬೆನ್ನೂರ್, ಅಧ್ಯಕ್ಷರು, ಬೆಂಗಳೂರು ನಗರ ಜಿಲ್ಲಾ ವೇದಿಕೆ, ಇವರು ದಿನಾಂಕ ೨೫-೦೩-೨೦೦೬ರ ವರದಿಯಲ್ಲಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗವು ದಿನಾಂಕ ೨೩-೦೧-೨೦೦೬ರ ತಿಳುವಳಿಕೆ ಮೂಲಕ ರಚಿಸಲಾಗಿದ್ದ ಆರೋಪಗಳು ನಿಸ್ಸಂದೇಹವಾಗಿ ರುಜುವಾತಾಗಿದೆಯೆಂದು ವರದಿಯನ್ನು ನೀಡಿರುತ್ತಾರೆ. ಸದರಿ ವರದಿಗೆ ಸಂಬಂಧಿಸಿದಂತೆ ಏನಾದರೂ ಹೇಳಿಕೆ ಇದ್ದಲ್ಲಿ ಅಗತ್ಯ ದಾಖಲೆಗಳೊಂದಿಗೆ ಸಲ್ಲಿಸುವಂತೆ ದಿನಾಂಕ ೩೧-೦೩-೨೦೦೬ರ ತಿಳುವಳಿಕೆಯಲ್ಲಿ ಶ್ರೀ ಬಿ.ಕೆ. ಮಂಜುನಾಥ್ ಇವರಿಗೆ ತಿಳಿಸಲಾಗಿ, ಶ್ರೀ ಬಿ.ಕೆ.ಮಂಜುನಾಥ್ ಇವರು ದಿನಾಂಕ ೦೮-೦೪-೨೦೦೬ರ ಮನವಿಯಲ್ಲಿ "ಬೆಂಗಳೂರು ನಗರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರು ಹಾಗೂ ವಿಚಾರಣಾಧಿಕಾರಿಗಳ ದಿನಾಂಕ ೨೫-೦೩-೨೦೦೫ರ ವರದಿ ನನಗೆ ತಲುಪಿದ್ದು, ಅದಕ್ಕೆ ಸಂಬಂಧಿಸಿದಂತೆ ನನ್ನ ಲಿಖಿತ ಹೇಳಿಕೆಯನ್ನು ದಿನಾಂಕ ೨೯-೦೩-೨೦೦೬ರಂದು ತಮ್ಮ ಕಛೇರಿಗೆ ಸಲ್ಲಿಸಿರುತ್ತೇನೆ" ಎಂದು ಹೇಳಿಕೊಂಡಿರುತ್ತಾರೆ. ದಿನಾಂಕ ೨೮-೦೩-೨೦೦೬ರ ಮನವಿಯಲ್ಲಿ "ಶಿಸ್ತು ಪ್ರಾಧಿಕಾರದಲ್ಲಿರುವ ತಾವು ಕೈಗೊಳ್ಳುವ ತೀರ್ಮಾನದಂತೆ ನನ್ನ ಮೇಲೆ ಆರೋಪದ ಹಿನ್ನೆಲೆಯಲ್ಲಿ ಹೇಗೆ ಬೇಕಾದರೂ ಕ್ರಮ ಕೈಗೊಳ್ಳುತ್ತೀರೆಂದು ನನಗೆ ಗೊತ್ತು" ಎಂದು ದಾಖಲಿಸಿದ್ದು, ಅನಧಿಕೃತ ಗೈರುಹಾಜರಿ ಹಾಗೂ ಉದ್ಧಟತನದ ವರ್ತನೆಯ ದುರ್ನಡತೆಯನ್ನು ತಳ್ಳಿಹಾಕುವಂತಹ ಯಾವುದೇ ಹೇಳಿಕೆ ಅಥವಾ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ ಹಾಗೂ ಆರೋಪಗಳಿಂದ ಮುಕ್ತಗೊಳಿಸಲು ಕೋರಿಕೆಯನ್ನು ಸಲ್ಲಿಸಿರುವುದಿಲ್ಲ.

ಶ್ರೀ ಎ.ಎಂ.ಬೆನ್ನೂರ್, ಅಧ್ಯಕ್ಷರು, ಜಿಲ್ಲಾ ವೇದಿಕೆ, ಬೆಂಗಳೂರು ನಗರ ಜಿಲ್ಲೆ, ಇವರು ಶ್ರೀ ಬಿ.ಕೆ.ಮಂಜುನಾಥ್, ದ್ವಿತೀಯ ದರ್ಜೆ ಸಹಾಯಕ, ಉಡುಪಿ ಜಿಲ್ಲೆ, ಇವರ ವಿರುದ್ಧದ ಇಲಾಖಾ ವಿಚಾರಣಾಧಿಕಾರಿಗಳು, ದಿನಾಂಕ ೨೫-೦೩-೨೦೦೬ರ ವರದಿಯಲ್ಲಿ ಶ್ರೀ ಬಿ.ಕೆ.ಮಂಜುನಾಥ್ ಇವರಿಗೆ ಇಲಾಖಾ ವಿಚಾರಣೆ ಬಗ್ಗೆ ತಿಳುವಳಿಕೆಯನ್ನು ನೀಡಿದಾಗ್ಯೂ, ಸದರಿ ತಿಳುವಳಿಕೆಯು ಶ್ರೀ ಬಿ.ಕೆ.ಮಂಜುನಾಥ್ ಇವರಿಗೆ ತಲುಪಿದ್ದಾಗ್ಯೂ ಇಲಾಖಾ ವಿಚಾರಣೆ ಸಮಯದಲ್ಲಿ ಹಾಜರಾಗದೇ ಇದ್ದುದರಿಂದ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ರಿಜಿಸ್ಟ್ರಾರ್‌ರವರಾದ ಶ್ರೀ ಕೆ.ಎಲ್.ಶಿವಲಿಂಗೇಗೌಡ, ಇವರನ್ನು ವಿಚಾರಣೆ ಮಾಡಿ ಸಂಪೂರ್ಣ ದಾಖಲೆಗಳನ್ನು ಪರಿಶೀಲಿಸಿಕೊಂಡು ಆರೋಪಗಳು ರುಜುವಾತಾಗಿವೆಯೆಂದು ತಮ್ಮ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ ೨೩-೦೧-೨೦೦೬ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೧(೪)ರ ಅನ್ವಯ ನೀಡಲಾದ ತಿಳುವಳಿಕೆಯೊಂದಿಗೆ ರಚಿಸಲಾದ ಆರೋಪಗಳನ್ನು ಇಲಾಖಾ ವಿಚಾರಣಾಧಿಕಾರಿಗಳ ದಿನಾಂಕ ೨೫-೦೩-೨೦೦೬ರ ವರದಿಯನ್ನು, ಅದಕ್ಕೆ ಸಂಬಂಧಿಸಿದಂತೆ ಗುರುತಿಸಲಾದ ನಿಶಾನೆ ಪಿ-೧ರಿಂದ ಪಿ-೨೦ರವರೆಗಿನ ದಾಖಲೆಗಳನ್ನು ಹಾಗೂ ಶ್ರೀ ಬಿ.ಕೆ.ಮಂಜುನಾಥ್ ಇವರ ದಿನಾಂಕ ೨೮-೦೩-೨೦೦೬ರ ಮನವಿ ಮತ್ತು ದಿನಾಂಕ ೦೮-೦೪-೨೦೦೬ರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ಶ್ರೀ ಬಿ.ಕೆ. ಮಂಜುನಾಥ್ ಈತ ಕರ್ನಾಟಕ ರಾಜ್ಯ ಗ್ರಾಹಕರ ವಾಜ್ಯಗಳ ಪರಿಹಾರ ಆಯೋಗದ ದಿನಾಂಕ ೨೨-೦೬-೨೦೦೫ರ ಆದೇಶದ ಅನ್ವಯ ಸಾರ್ವಜನಿಕ ಹಿತದೃಷ್ಠಿಯಿಂದ ದಕ್ಷಿಣ ಕನ್ನಡ ಜಿಲ್ಲಾ ವೇದಿಕೆಯಲ್ಲಿ ಅನ್ಯ ಕರ್ತವ್ಯದ ಮೇರೆಗೆ ಸಲ್ಲಿಸಬೇಕಾದ ಸೇವೆಯಿಂದ ತಪ್ಪಿಸಿಕೊಳ್ಳಲು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿ ನಿರ್ವಹಿಸಬೇಕಾದ ಕೆಲಸದ ಒತ್ತಡ ಸಾಕಷ್ಟು ಇದ್ದಾಗ್ಯೂ ಕೂಡ ಅಂಥ ಕೆಲಸವನ್ನು ನಿರ್ವಹಿಸದೇ ಎರವಲು ಸೇವೆ ಮೇರೆಗೆ ಸರ್ಕಾರಿ ಸಚಿವಾಲಯಕ್ಕೆ ನಿಯೋಜನೆ ಬಯಸಿ ಸಾಕಷ್ಟು ಮನವಿಗಳನ್ನು ಹಾಗೂ ರಾಜಕೀಯ

ಶಿಫಾರಸ್ಸುಗಳನ್ನು ತಂದಿರುವುದು ಸ್ಪಷ್ಟವಾಗಿರುತ್ತದೆ. ಜಿಲ್ಲಾ ವೇದಿಕೆಯ ಕಾರ್ಯನಿರ್ವಹಣೆಗೆ ಸಿಬ್ಬಂದಿಯ ಕೊರತೆಯು ಇರುವುದರಿಂದ, ಎರವಲು ಸೇವೆಗೆ ತಮ್ಮ ಮನವಿಯನ್ನು ಪರಿಗಣಿಸುವುದಿಲ್ಲವೆಂದು, ಇನ್ನು ಮುಂದೆ ಎರವಲು ಸೇವೆಯನ್ನು ಬಯಸಿ ಮನವಿ ಸಲ್ಲಿಸಿದಲ್ಲಿ ಶಿಸ್ತಿನ ಕ್ರಮ ಜರುಗಿಸುತ್ತೇವೆಂದು ಸೂಚನೆಯನ್ನು ನೀಡಲಾಗಿದ್ದೂ ಕೂಡ ಸದರಿ ನೌಕರರು ಉದ್ಧಟತನದಿಂದ ವರ್ತಿಸಿ ದಿನಾಂಕ ೦೯-೧೨-೨೦೦೫ರ ಮನವಿಯಲ್ಲಿ

> ನನ್ನೀ ಮನವಿಯನ್ನು ತಿರಸ್ಕರಿಸಲು ಯಾವ ಮಾನದಂಡವನ್ನು ಅನುಸರಿಸಿದಿರಿ ಎಂಬ ಬಗ್ಗೆ ತಿಳಿಯುವ ಹಕ್ಕು ನನಗಿದೆ. ಈ ರೀತಿ ಪದೇ ಪದೇ ನನಗೆ ತಮ್ಮ ಕಛೇರಿಯಿಂದ ಆದ ತೊಂದರೆಗಳಿಗೆ ಕಾರಣರಾದವರು ಯಾರೇ ಆಗಿರಲಿ, ನಿಯಮಬಾಹಿರವಾಗಿ ನನ್ನ ಮೇಲೆ ವಿಚಾರಣೆ ಬಾಕಿ ಇರಿಸಿ ಅಮಾನತ್ತುಗೊಳಿಸುವ ಶಿಕ್ಷೆ ವಿಧಿಸುವ ತಿಳುವಳಿಕೆ ಪತ್ರ ನೀಡಿದ್ದಕ್ಕೆ ಖಂಡನಾರ್ಹರು.

ಎಂದು ಶ್ರೀ ಬಿ.ಕೆ.ಮಂಜುನಾಥ್ ಇವರು ಉದ್ಧಟತನದಿಂದ ಹೇಳಿಕೆಯನ್ನು ನೀಡಿರುವುದು ಸದರಿ ನೌಕರರ ದುರ್ನಡತೆಯನ್ನು ಸ್ಪಷ್ಟವಾಗಿ ತೋರಿಸುವುದಲ್ಲದೇ ಸದರಿ ನೌಕರರು ದಕ್ಷಿಣ ಕನ್ನಡ ಜಿಲ್ಲಾ ವೇದಿಕೆಯಲ್ಲಿ ಅನ್ಯ ಕರ್ತವ್ಯದ ಮೇರೆಗೆ ಸಾರ್ವಜನಿಕ ಹಿತದೃಷ್ಠಿಯಿಂದ ಕಾರ್ಯನಿರ್ವಹಿಸಲು ಹಿಂಜರಿಯುತ್ತಿರುವುದು ಸಂಬಂಧಪಟ್ಟ ನೌಕರರ ಮನವಿಗಳಿಂದ ಸ್ಪಷ್ಟವಾಗಿರುತ್ತದೆ ಹಾಗೂ ದಿನಾಂಕ ೦೫-೦೭-೨೦೦೫ರಿಂದ ದಿನಾಂಕ ೧೯-೧೨-೨೦೦೫ (ಅಮಾನತ್ತಿನ ಆದೇಶವನ್ನು ಹೊರಡಿಸುವವರೆಗೆ) ಯಾವುದೇ ತರಹದ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೇ ಅನಧಿಕೃತವಾಗಿ ಗೈರುಹಾಜರಿಯಲ್ಲಿದ್ದುದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ ೧೦೮ರ ಅಡಿಯಲ್ಲಿ ದುರ್ನಡತೆಯಾಗಿರುತ್ತದೆ. ಈ ದುರ್ನಡತೆಗೆ ಸಂಬಂಧಿಸಿದಂತೆ ಸಂಬಂಧಪಟ್ಟ ನೌಕರನ ವಿರುದ್ಧ ಶಿಸ್ತು ಕ್ರಮ ಜರುಗಿಸಿ ಶಿಕ್ಷೆಯನ್ನು ವಿಧಿಸುವುದನ್ನು ಹೊರತುಪಡಿಸಿ ಬೇರೆ ಮಾರ್ಗವಿರುವುದಿಲ್ಲ. ಇಲಾಖಾ ವಿಚಾರಣೆ ಸಂದರ್ಭದಲ್ಲಿಯೂ ಕೂಡ ಸದರಿ ನೌಕರನು ವಿಚಾರಣೆಗೆ ಹಾಜರಾಗಿ ತನ್ನ ಅಹವಾಲನ್ನು ಹೇಳಿಕೊಳ್ಳಲು ಪ್ರಯತ್ನಿಸಿರುವುದಿಲ್ಲ ಹಾಗೂ ಆರೋಪಗಳನ್ನು ತಳ್ಳಿಹಾಕುವ ಹೇಳಿಕೆಯನ್ನು ಮತ್ತು ದಾಖಲೆಗಳನ್ನು ಸಲ್ಲಿಸಲು ವಿಫಲರಾಗಿರುತ್ತಾರೆ. ಈ ರೀತಿ ವಿಫಲರಾಗಿರುವುದಲ್ಲದೇ, ಪುನಃ ಉದ್ಧಟತನದ ಹೇಳಿಕೆಯನ್ನು ದಿನಾಂಕ ೨೮-೦೩-೨೦೦೬ರ ಮತ್ತು ೦೮-೦೪-೨೦೦೬ರ ಮನವಿಯಲ್ಲಿ ಹೇಳಿಕೊಂಡಿರುತ್ತಾರೆ. ಸರ್ಕಾರಿ ಸೇವೆಯಲ್ಲಿ ಸಾರ್ವಜನಿಕ ಹಿತದೃಷ್ಠಿಯ ಸೇವೆಗೆ ಮಾತ್ರ ಪ್ರಾಮುಖ್ಯತೆ ಇದ್ದು, ಸರ್ಕಾರಿ ನೌಕರರು ಸಾರ್ವಜನಿಕ ಸೇವೆಗೆ ಸಂಬಂಧಿಸಿದಂತೆ ತಮ್ಮನ್ನು ನಿಯೋಜಿಸಿದ ಹುದ್ದೆಯಲ್ಲಿ ಅಥವಾ ಕಾರ್ಯಾಲಯದಲ್ಲಿ ಕಾರ್ಯವನ್ನು ನಿರ್ವಹಿಸಬೇಕಾಗಿರುತ್ತದೆ ಹಾಗೂ ಹೀಗೆ ಕಾರ್ಯವನ್ನು ನಿರ್ವಹಿಸುವಾಗ ಶಿಸ್ತು ಮತ್ತು ದಕ್ಷತೆಗೆ ಪ್ರಾಮುಖ್ಯತೆಯನ್ನು ನೀಡಬೇಕಾಗಿರುತ್ತದೆ. ಸರ್ಕಾರಿ ನೌಕರರು ಯಾವುದೇ ಸಂದರ್ಭದಲ್ಲಿ ರಜೆಯನ್ನು ತಮ್ಮ ಹಕ್ಕೆಂದು ಪರಿಗಣಿಸುವ ಹಾಗಿಲ್ಲ. ಯಾವುದೇ ಸಂದರ್ಭದಲ್ಲಿ ಸಕಾರಣಗಳನ್ನು ಹಾಗೂ ವೈದ್ಯಕೀಯ ಚಿಕಿತ್ಸೆಯ ಬಗ್ಗೆ ಅಗತ್ಯ ದಾಖಲೆಗಳನ್ನು ಸಲ್ಲಿಸಿ ಸಕ್ಷಮ ಪ್ರಾಧಿಕಾರದಿಂದ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೇ ನಾಲ್ಕು ತಿಂಗಳಿಗೂ ಮೇಲ್ಪಟ್ಟ ಅವಧಿಗೆ ಅನಧಿಕೃತ ಗೈರುಹಾಜರಾದಲ್ಲಿ ಅಂಥ ಗೈರುಹಾಜರಿಯನ್ನು ದುರ್ನಡತೆಯೆಂದು ಪರಿಗಣಿಸುವ ಹಾಗೂ ಸಂಬಂಧಿಸಿದ ನೌಕರನನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ ೧೦೮ರ ಅಡಿಯಲ್ಲಿ ಅವಕಾಶವನ್ನು ಕಲ್ಪಿಸಲಾಗಿರುವುದನ್ನು ಗಣನೆಗೆ ತೆಗೆದುಕೊಂಡು, ಶ್ರೀ ಬಿ.ಕೆ.ಮಂಜುನಾಥ್, ದ್ವಿತೀಯ ದರ್ಜೆ ಸಹಾಯಕರು, ಜಿಲ್ಲಾ ವೇದಿಕೆ, ಉಡುಪಿ ಜಿಲ್ಲೆ, ಇವರ ದುರ್ನಡತೆಯನ್ನು ಮತ್ತು ಉದ್ಧಟತನವನ್ನು ಗಮನಿಸಿಕೊಂಡು ವಿಚಾರಣಾ ವರದಿಯನ್ನು ಆಧರಿಸಿ ನ್ಯಾಯೋಚಿತವಾದ ಶಿಕ್ಷೆಯನ್ನು ವಿಧಿಸುವ ಬಗ್ಗೆ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆಃ ಕರಾಆಃಆಡಳಿತಃದ್ವಿದಸಃ೩೮ಃ೨೦೦೪, ಬೆಂಗಳೂರು, ದಿನಾಂಕ ೨೫ನೇ ಏಪ್ರಿಲ್ ೨೦೦೬**

ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಇಲಾಖಾ ಮುಖ್ಯಸ್ಥರಾದ ಹಾಗೂ ಈ ಸೇವೆಯ ಗ್ರೂಪ್-ಡಿ ಮತ್ತು ಗ್ರೂಪ್-ಸಿ ನೌಕರರಿಗೆ ಸಂಬಂಧಿಸಿದಂತೆ ಶಿಸ್ತು ಪ್ರಾಧಿಕಾರವಾದ ನ್ಯಾಯಮೂರ್ತಿ ಚಂದ್ರಶೇಖರಯ್ಯ, ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಆದ ನಾನು ನನಗೆ ದತ್ತವಾಗಿರುವ ಅಧಿಕಾರದ ಅಡಿಯಲ್ಲಿ, ಶ್ರೀ ಬಿ.ಕೆ.ಮಂಜುನಾಥ್, ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಉಡುಪಿ, ಇವರ ವಿರುದ್ಧದ ದುರ್ನಡತೆಯ ಆರೋಪಗಳು ರುಜುವಾತಾಗಿರುವ ಪ್ರಯುಕ್ತ, ಸದರಿ ನೌಕರರು ನಾಲ್ಕು ತಿಂಗಳ ಅವಧಿಗೂ ಮೇಲ್ಪಟ್ಟ ಅವಧಿಯಲ್ಲಿ ಅನಧಿಕೃತ ಗೈರುಹಾಜರಿಯಲ್ಲಿರುವ ಪ್ರಯುಕ್ತ ಮತ್ತು ಉದ್ಧಟತನದಿಂದ ವರ್ತಿಸಿರುವುದಕ್ಕೆ ಸಂಬಂಧಿಸಿದಂತೆ, ಸಂಬಂಧಪಟ್ಟ ನೌಕರನನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ 8(viii)ರ ಅನ್ವಯ ಶ್ರೀ ಬಿ.ಕೆ.ಮಂಜುನಾಥ್, ದ್ವಿತೀಯ ದರ್ಜೆ ಸಹಾಯಕ, ಉಡುಪಿ ಜಿಲ್ಲಾ ವೇದಿಕೆ, ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಶ್ರೀ ಬಿ.ಕೆ. ಮಂಜುನಾಥ್, ದ್ವಿತೀಯ ದರ್ಜೆ ಸಹಾಯಕ, ಉಡುಪಿ ಜಿಲ್ಲಾ ವೇದಿಕೆ, ಇವರು ದಿನಾಂಕ ೦೫.೦೭.೨೦೦೫ ರಿಂದ ದಿನಾಂಕ ೧೯-೧೨-೨೦೦೫(ಎದಿಸೇ)ರವರೆಗೆ ಅನಧಿಕೃತ ಗೈರುಹಾಜರಿಯಲ್ಲಿದ್ದ ಅವಧಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 106-Aರ ಅನ್ವಯ ಅನಧಿಕೃತ ಗೈರುಹಾಜರಿ ಅವಧಿ ಎಂದು ಪರಿಗಣಿಸಲಾಗಿದೆ ಹಾಗೂ ಶ್ರೀ ಬಿ.ಕೆ. ಮಂಜುನಾಥ್ ಇವರು ದಿನಾಂಕ ೨೦-೧೨-೨೦೦೫ರಿಂದ ಅಮಾನತ್ತಿನಲ್ಲಿರುವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100(1)(b) ರ ಅನ್ವಯ ಕರ್ತವ್ಯದಲ್ಲಿಲ್ಲದ ಅವಧಿಯೆಂದು ಪರಿಗಣಿಸಲಾಗಿದೆ.

ಶ್ರೀ ಬಿ.ಕೆ. ಮಂಜುನಾಥ್, ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಿದ ಆದೇಶವನ್ನು ತಕ್ಷಣದಿಂದ ಜಾರಿಗೆ ತರಲು ಅಧ್ಯಕ್ಷರು, ಜಿಲ್ಲಾ ವೇದಿಕೆ, ಉಡುಪಿ ಜಿಲ್ಲೆ, ಇವರು ಸೂಕ್ತ ಕ್ರಮ ಕೈಗೊಳ್ಳುವುದು.

**ನ್ಯಾಯಮೂರ್ತಿ ಚಂದ್ರಶೇಖರಯ್ಯ,**

ಅಧ್ಯಕ್ಷರು,

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು

ಹಾಗೂ ಶಿಸ್ತು ಪ್ರಾಧಿಕಾರ ಮತ್ತು ನೇಮಕಾತಿ ಪ್ರಾಧಿಕಾರ,

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ

ಹಾಗೂ ಜಿಲ್ಲಾ ವೇದಿಕೆಗಳ ಸೇವೆ

ಪಿ.ಆರ್. 859

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು ರವರ ನ್ಯಾಯಾಲಯ.**

**ಎಫ್.ಓ.ಸಿ. ಸಂಖ್ಯೆ:26/2004-05, ದಿನಾಂಕ:29ನೇ ಜೂನ್ 2004**

**ಸಂಖ್ಯೆ:ಎ೨.ಅಅಪ್ರ.71A.26/2004-05, ದಿನಾಂಕ:18ನೇ ಜನವರಿ 2006.**

| | | |
|---|---|---|
| ಉಪಸ್ಥಿತರು | : | ಪುಟ್ಟರಾಜು<br>ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ, ಬೆಂಗಳೂರು. |
| ಅರ್ಜಿದಾರರು : ಆರೋಪಿಗಳು | : | ಮೇ:ಆರ್.ಕೆ.ಎಸ್. ಆಗ್ರೋಟೆಕ್ ಲಿಮಿಟೆಡ್,<br>ಜಿಗಣಿ ಇಂಡಸ್ಟ್ರೀಯಲ್ ಏರಿಯಾ,<br>ಆನೇಕಲ್ |
| ಪಿರ್ಯಾದಿದಾರರು | : | ವಲಯ ಅರಣ್ಯ ಅಧಿಕಾರಿಗಳು,<br>ಅರಣ್ಯ ಸಂಚಾರಿದಳ, ಬೆಂಗಳೂರು. |

**ಪ್ರಕರಣ ಮುಖ್ಯಾಂಶಗಳು:**

ದಿನಾಂಕ:29/6/2004 ರಂದು ಬೆಳಗ್ಗಿನ ಜಾವ 5.15 ಗಂಟೆಗೆ ನಂ.1, ಸೈಟ್ ನಂ.61, ಪೇಸ್ ನಂ.2, ರಲ್ಲಿರುವ ಆರ್.ಕೆ.ಎಸ್. ಆಗ್ರೋಟೆಕ್ ಲಿಮಿಟೆಡ್, ಜಿಗಣಿ ಇಂಡಸ್ಟ್ರೀಯಲ್ ಏರಿಯಾ, ಆನೇಕಲ್, ಇಲ್ಲಿ ಶ್ರೀಗಂಧದ ದಾಸ್ತಾನು ಮಾಡಿರುವ ಮಾಹಿತಿ ಮೇರೆಗೆ ವಲಯ ಅರಣ್ಯ ಅಧಿಕಾರಿಗಳು ಮತ್ತು ಸಿಬ್ಬಂದಿಯವರು ಸ್ಥಳಕ್ಕೆ ಧಾವಿಸಿ ಪರಿಶೀಲಿಸಿ ನೋಡಿದಾಗ ಯಾವುದೇ ಪರವಾನಿಗೆ ಇಲ್ಲದ ಶ್ರೀಗಂಧದ ಎಣ್ಣೆ ಮತ್ತು ಚಕ್ಕೆ ಪುಡಿಯನ್ನು ದಾಸ್ತಾನು ಮಾಡಿರುವುದು ಕಂಡು ಬಂದು, ತಕ್ಷಣವೇ ಸ್ಥಳದಲ್ಲೇ ಮಹಜರ್ ಕ್ರಮ ಜರುಗಿಸಿ ಶ್ರೀಗಂಧದ ಎಣ್ಣೆ ಮತ್ತು ಚಕ್ಕೆ ಪುಡಿಯನ್ನು ಅಮಾನತ್ತುಗೊಳಿಸಿ ಅವುಗಳನ್ನು ತೂಕ ಮಾಡಿದಾಗ 4 ಕೆಜಿ 45 ಗ್ರಾಂ ಶ್ರೀಗಂಧದ ಎಣ್ಣೆ ಮತ್ತು 140 ಕೆಜಿ ಶ್ರೀಗಂಧದ ಚಕ್ಕೆ ಪುಡಿ ಇರುವುದು ಕಂಡು ಬಂದು ಆ ಮಾಲನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಅವರ ಮುಂದೆ ದಿನಾಂಕ:29/6/2004 ರಂದು ಹಾಜರುಪಡಿಸಿರುತ್ತಾರೆ. ಅಕ್ರಮವಾಗಿ ಯಾವುದೇ ರಹದಾರಿ ಇಲ್ಲದೆ ದಾಸ್ತಾನು ಮಾಡಿರುವುದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71A ರಡಿ ಕ್ರಮ ಜರುಗಿಸಿ 4 ಕೆಜಿ 45 ಗ್ರಾಂ ಶ್ರೀಗಂಧದ ಎಣ್ಣೆ ಮತ್ತು 140 ಕೆಜಿ ಶ್ರೀಗಂಧದ ಚಕ್ಕೆ ಪುಡಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಕಾನೂನು ಕ್ರಮ ಜರುಗಿಸಲು ಕೋರಿದ ಮೇರೆಗೆ.

ಪ್ರಾಧಿಕಾರ ಅಧಿಕಾರಿಗಳು ಈ ಮೇಲೆ ಹೇಳಿದ ಪ್ರಕರಣವನ್ನು ಪರಿಶೀಲಿಸಿ ಸದರಿ ಅಪರಾಧವು ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71A ರಡಿಯಲ್ಲಿ ಕ್ರಮ ಕೈಗೊಳ್ಳಲು ಸೂಕ್ತವಾದುದೆಂದು ಪರಿಗಣಿಸಿ ವಲಯ ಅರಣ್ಯ ಅಧಿಕಾರಿ ಶ್ರೀ ಹೆಚ್. ನಾಗರಾಜು, ಅಪರಾಧದಲ್ಲಿ ಒಳಗೊಂಡಿರುವ ಶ್ರೀಗಂಧ ಮತ್ತು ಶ್ರೀಗಂಧದ ಎಣ್ಣೆಯನ್ನು ಸುಪರ್ಧಿಗೆ ತೆಗೆದುಕೊಳ್ಳಲು ಆದೇಶಿಸಿದೆ. ಅರ್ಜಿದಾರನಿಗೆ ಕಾರಣ ಕೇಳುವ ನೋಟೀಸನ್ನು ಅರಣ್ಯ ಕಾಯ್ದೆ ಕಲಂ 71B ನೇದರ ಕೆಳಗೆ ಹೊರಡಿಸಲಾಗಿದೆ.

ಪ್ರಾಧಿಕಾರವು ಕಳುಹಿಸಿದ 71B ಕಾರಣ ಕೇಳುವ ನೋಟೀಸ್‌ಗೆ ಸದರಿ ಮಾಲೀಕರಿಂದ 15 ದಿವಸದೊಳಗಾಗಿ ಈ ನ್ಯಾಯಾಲಯಕ್ಕೆ ವಿವರಗಳನ್ನು ಸಲ್ಲಿಸತಕ್ಕದ್ದು ಎಂದು ಆದೇಶಿಸಿದರು ಸದರಿ ಸಂಸ್ಥೆಯವರಿಂದ ಯಾವುದೇ ವಿವರಗಳು ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿರುವುದಿಲ್ಲ.

ತದನಂತರ ಮೇ:ಆರ್.ಕೆ.ಎಸ್.ಆಗ್ರೋಟೆಕ್ ಲಿಮಿಟೆಡ್, ಜಿಗಣಿ ಇಂಡಸ್ಟ್ರೀಯಲ್ ಏರಿಯಾ, ಆನೇಕಲ್ ರವರಿಗೆ ದಿನಾಂಕ:8/2/2005 ರಂದು ಷೋಕಾಶ್ ನೋಟಿಸ್‌ನ್ನು ಕಳುಹಿಸಿದ್ದು, ಸದರಿ ಪತ್ರವನ್ನು ಸ್ವೀಕರಿಸಿದ ನಂತರವು ಸಂಬಂಧಿಸಿದ ಸಂಸ್ಥೆಯವರು ಯಾರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಮತ್ತು ಯಾವ ಉತ್ತರವನ್ನಾಗಲಿ ಅಥವಾ ಸಮಜಾಯಿಷಿಯನ್ನಾಗಲಿ ನೀಡಿರುವುದಿಲ್ಲ.

ಪ್ರಾಧಿಕಾರವು ಮತ್ತೆ ಮೇ:ಆರ್.ಕೆ.ಎಸ್.ಆಗ್ರೋಟೆಕ್ ಲಿಮಿಟೆಡ್, ಜಿಗಣಿ ಇಂಡಸ್ಟ್ರೀಯಲ್ ಏರಿಯಾ, ಆನೇಕಲ್ ರವರಿಗೆ ದಿನಾಂಕ:5/7/2005 ಮತ್ತು 16/7/2005 ರಂದು ಸಾಕ್ಷ್ಯ ನೀಡಲು ಸಮನ್ಸ್ ಅನ್ನು ಹೊರಡಿಸಿದ್ದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ ಸ್ವತ್ತಿನ ದಾಖಲಾತಿಗಳನ್ನು ಹಾಜರುಪಡಿಸಲು ತಿಳಿಸಿದ್ದು ಸದರಿ ಪತ್ರಗಳನ್ನು ಮೇ:ಆರ್.ಕೆ.ಎಸ್.ಆಗ್ರೋಟೆಕ್ ಲಿಮಿಟೆಡ್, ಜಿಗಣಿ ಇಂಡಸ್ಟ್ರೀಯಲ್, ಆನೇಕಲ್, ಇವರು ತೆಗೆದುಕೊಳ್ಳದ ಕಾರಣ ಈ ಕಛೇರಿಗೆ ಹಿಂದಕ್ಕೆ ಬಂದಿರುತ್ತವೆ. ಹಾಗೂ ದಿನಾಂಕ:29/7/2005 ರಂದು ಮತ್ತೆ ಸದರಿ ಸಂಸ್ಥೆಯವರಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಲು ತಿಳಿಸಿದ್ದು ಈ ಪತ್ರಕ್ಕೆ ಯಾವುದೇ ಉತ್ತರವಾಗಲಿ ಅಥವಾ ಖುದ್ದಾಗಿ ಪ್ರಾಧಿಕಾರದ ಮುಂದೆ ಹಾಜರಾಗಿ ದಾಖಲಾತಿಗಳನ್ನು ಹಾಜರು ಪಡಿಸುವುದಾಗಲಿ ಮಾಡಿರುವುದಿಲ್ಲ.

ಈ ಪ್ರಾಧಿಕಾರವು ದಿನಾಂಕ:2/9/2005 ರಂದು ವಲಯ ಅರಣ್ಯ ಅಧಿಕಾರಿಗಳು, ಹಾಗೂ ಸಿಬ್ಬಂದಿಯವರು ಮೇ:ಆರ್.ಕೆ.ಎಸ್.ಆಗ್ರೋಟೆಕ್ ಲಿಮಿಟೆಡ್, ಜಿಗಣಿ ಇಂಡಸ್ಟ್ರೀಯಲ್ ಏರಿಯಾ, ಆನೇಕಲ್ ಪ್ಯಾಕ್ಟರಿಗೆ ಭೇಟಿ ನೀಡಿ ಹೆಚ್ಚಿನ ವಿವರಗಳನ್ನು ನೀಡಲು ತಿಳಿಸಿದ ಮೇರೆಗೆ ವಲಯ ಅರಣ್ಯ ಅಧಿಕಾರಿಗಳು, ಮೇಲ್ಕಂಡ ಸಂಸ್ಥೆಯ ಆವರಣಕ್ಕೆ ಭೇಟಿ ನೀಡಿದಾಗ ಸದರಿ ಕಂಪನಿಯು ಲಾಕ್‌ಔಟ್ ಮಾಡಿರುವುದು ಕಂಡು ಬಂದಿದ್ದು, ವ್ಯವಹಾರಗಳು ನಿಂತಿರುವುದು ಕಂಡು ಬಂದಿರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಸದರಿ ಕಂಪನಿಯ ಯಾರೊಬ್ಬರು ಈ ಪ್ರಾಧಿಕಾರದ ಮುಂದೆ ಹಾಜರಾಗದೆ, 71B ಕಾರಣ ಕೇಳುವ ನೋಟೀಸ್, ಷೋಕಾಸ್ ನೋಟೀಸ್ ಹಾಗೂ ಸಾಕ್ಷಿ ನೀಡುವ ಸಮನ್ಸ್‌ಗಳಿಗೂ ಯಾವುದೇ ರೀತಿಯ ಉತ್ತರವನ್ನು ನೀಡದಿರುವುದು ಈ ಅಪರಾಧವೆಸಗಿರುವ ಸಂಸ್ಥೆಯ ನಿರ್ಲಕ್ಷತೆ ಸ್ಪಷ್ಟವಾಗಿ ಇರುತ್ತದೆ. ಆದುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ನಾನು ಪುಟ್ಟರಾಜು, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ, ಬೆಂಗಳೂರು ರವರು ಮೇಲ್ಕಂಡ ಅರಣ್ಯ ಅಪರಾಧವು ನಡೆದಿರುವ ಬಗ್ಗೆ ಸಾಕಷ್ಟು ಕಾರಣಗಳು ಇರುವುದರಿಂದ ಸದರಿ ಅಪರಾಧವನ್ನು ಸ್ಥಿರೀಕರಿಸಿ ಮತ್ತು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71A ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕಛೇರಿಯ ಅರಣ್ಯ ಅಪರಾಧ ಸಂಖ್ಯೆ:26/2004-05 ಗೆ ಸಂಬಂಧಿಸಿದ 4 ಕೆಜಿ 45 ಗ್ರಾಂ ಶ್ರೀಗಂಧದ ಎಣ್ಣೆ ಮತ್ತು 140 ಕೆಜಿ ಶ್ರೀಗಂಧದ ಚಕ್ಕೆ ಪುಡಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:18/1/2006 ರಂದು ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

ಪಿ.ಆರ್. 862

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ**

**ವಿಷಯ:** ಮಾಡೇಶ್ವರ ಹಾ.ಉ.ಮ.ಸ.ಸಂ.(ನಿ) ದೊಡ್ಡಬಳ್ಳಾಪುರ ತಾಲ್ಲೂಕು ಸಂಘಕ್ಕೆ ಕಲಂ 31(1) ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಆದೇಶ ಸಮ ಸಂಖ್ಯೆ ದಿ:19.7.2005.
2. ಈ ಕಛೇರಿಯ ಆದೇಶ ಸಂ: ಎಆರ್47/ಚುನಾವಣೆ/15/2005-06 ದಿನಾಂಕ: 15.2.2006.
3. ಚುನಾವಣಾಧಿಕಾರಿಗಳ ಪತ್ರ ದಿನಾಂಕ 28.3.2006.

**ಪ್ರಸ್ತಾವನೆ:**

ಮಾಡೇಶ್ವರ ಹಾ.ಉ.ಮ.ಸ.ಸಂ.(ನಿ) ದೊಡ್ಡಬಳ್ಳಾಪುರ ತಾಲ್ಲೂಕು ಇದಕ್ಕೆ ಉಲ್ಲೇಖಿತ (1)ರ ಆದೇಶದಡಿಯಲ್ಲಿ ವಿಶೇಷಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ವಿಶೇಷಾಧಿಕಾರಿಗಳ ಅವಧಿಯು ಮುಕ್ತಾಯಗೊಳ್ಳುವ ಪೂರ್ವದಲ್ಲಿ ನೂತನ ಆಡಳಿತ ಮಂಡಳಿಗೆ ರಚಿಸುವ ಸಲುವಾಗಿ ಚುನಾವಣೆ ಜರುಗಿಸಲು ಚುನಾವಣಾಧಿಕಾರಿಯನ್ನು ನೇಮಿಸಲಾಗಿತ್ತು. ಸದರಿ ಸಂಘದ ಚುನಾವಣಾ ವೇಳಾ ಪಟ್ಟಿಯಂತೆ ನಾಮಪತ್ರ ಮತ್ತು ಸೂಚಕರ ಮೂಲಕ ಸಲ್ಲಿಸುವ ಉಮೇದುವಾರಿಕೆ ಪತ್ರಗಳನ್ನು ಸಂಘದ ಸದಸ್ಯರಲ್ಲಿ ಯಾರೂ ಸಹ ಸಲ್ಲಿಸಿರುವುದಿಲ್ಲವಾದ್ದರಿಂದ ಚುನಾವಣೆ ಜರುಗಿಸಲು ಸಾಧ್ಯವಾಗಿರುವುದಿಲ್ಲವೆಂದು ಉಲ್ಲೇಖಿತ (3)ರಡಿ ಚುನಾವಣಾಧಿಕಾರಿಗಳು ವರದಿಯನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸಂಘಕ್ಕೆ ನೂತನ ಆಡಳಿತ ಮಂಡಳಿ ರಚಿಸಲು ಸಾಧ್ಯವಾಗದೇ ಇರುವುದರಿಂದ ಕಲಂ 31(1)ರಡಿ ಸದರಿ ಸಂಘಕ್ಕೆ ವಿಶೇಷಾಧಿಕಾರಿಯ ನೇಮಕ ಅವಶ್ಯಕ ಎಂದು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

**ಸಂಖ್ಯೆ: ಎಆರ್-47/ವಿ.ನೇ/2006-07, ದಿನಾಂಕ: 1ನೇ ಏಪ್ರಿಲ್ 2006**

ಹಿದಾಯತ್ ಉಲ್ಲಾಖಾನ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿ.ಎಂ.ಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ: 21.11.2001ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಮಾಡೇಶ್ವರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ದೊಡ್ಡಬಳ್ಳಾಪುರ ಈ ಸಂಘಕ್ಕೆ ವಿಶೇಷಾಧಿಕಾರಿಗಳನ್ನಾಗಿ ವಿಸ್ತರಣಾಧಿಕಾರಿ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ದೊಡ್ಡಬಳ್ಳಾಪುರ ಶಿಬಿರ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೂ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಉಪ ನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು ವಿಶೇಷಾಧಿಕಾರಿಗಳ ಅಧಿಕಾರವಾಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿ ಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ: 1ನೇ ಏಪ್ರಿಲ್ 2006 ರಂದು ಹೊರಡಿಸಿರುತ್ತೇನೆ.

**ಹಿದಾಯತ್ ಉಲ್ಲಾ ಖಾನ್**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ.

ಪಿ.ಆರ್. 863

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ**

**ವಿಷಯ:** ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ ಚನ್ನರಾಯಪಟ್ಟಣ ದೇವನಹಳ್ಳಿ ತಾಲ್ಲೂಕು ಸಂಘಕ್ಕೆ ಕಲಂ 31(1) ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ಸಂ: ಎಆರ್ 47/ಚುನಾವಣೆ/15/2005-06 ದಿನಾಂಕ:15.2.2006.
2. ವ್ಯವಸ್ಥಾಪಕರು, ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ ಚನ್ನರಾಯಪಟ್ಟಣ ದೇವನಹಳ್ಳಿ ತಾಲ್ಲೂಕು ಇವರ ಪತ್ರ ದಿನಾಂಕ:9.3.2006.

**ಪ್ರಸ್ತಾವನೆ:**

ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ ಚನ್ನರಾಯಪಟ್ಟಣ, ದೇವನಹಳ್ಳಿ ತಾಲ್ಲೂಕು ಈ ಬ್ಯಾಂಕಿಗೆ 2006-07 ರಿಂದ 2010-11ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿ ನಡೆಸಲು ಚುನಾವಣಾಧಿಕಾರಿಯನ್ನು ಉಲ್ಲೇಖಿತ (1) ರಡಿ ನೇಮಿಸಲಾಗಿತ್ತು. ಉಲ್ಲೇಖಿತ (2) ರಡಿ ಸದರಿ ಬ್ಯಾಂಕಿನ ವ್ಯವಸ್ಥಾಪಕರು ಈ ಕಛೇರಿಗೆ ಪತ್ರ ಬರೆಯುತ್ತಾ ಸಂಘದ ಆರ್ಥಿಕ ಪರಿಸ್ಥಿತಿ ಸರಿ ಇಲ್ಲದ ಕಾರಣದಿಂದ ಹಣಕಾಸಿನ ವ್ಯವಸ್ಥೆ ಮಾಡುವವರೆಗೆ ಚುನಾವಣೆ ಜರುಗಿಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ. ಸದರಿ ಬ್ಯಾಂಕಿನ ಆಡಳಿತದಲ್ಲಿ ಶೂನ್ಯ ಉಂಟಾಗಿರುವುದರಿಂದ ಕಲಂ 31(1)ರಡಿ ಸದರಿ ಬ್ಯಾಂಕಿಗೆ ವಿಶೇಷಾಧಿಕಾರಿಯ ನೇಮಕ ಅವಶ್ಯಕ ಎಂದು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಎಆರ್-47/ವಿ.ನೇ/2006-07, ದಿನಾಂಕ: 1ನೇ ಏಪ್ರಿಲ್ 2006**

ಹಿದಾಯತ್ ಉಲ್ಲಾಖಾನ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿ.ಎಂ.ಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ: 21.11.2001ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ ಚನ್ನರಾಯಪಟ್ಟಣ, ದೇವನಹಳ್ಳಿ ತಾ: ಈ ಬ್ಯಾಂಕಿಗೆ ವಿಶೇಷಾಧಿಕಾರಿಗಳನ್ನಾಗಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ (ನಿ) ವಿಜಯಪುರ ಶಾಖೆಯ ಮೇಲ್ವಿಚಾರಕರಾದ ಶ್ರೀ ವಿ. ನಾಗರಾಜರೆಡ್ಡಿ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಬ್ಯಾಂಕಿನ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೂ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಬ್ಯಾಂಕಿನ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಉಪ ನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು ವಿಶೇಷಾಧಿಕಾರಿಗಳ ಅಧಿಕಾರವಾಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿ ಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ: 1ನೇ ಏಪ್ರಿಲ್ 2006 ರಂದು ಹೊರಡಿಸಿರುತ್ತೇನೆ.

**ಹಿದಾಯತ್ ಉಲ್ಲಾ ಖಾನ್**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ.

ಪಿ.ಆರ್. 864

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ**

**ವಿಷಯ:** ರಾಜಘಟ್ಟ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ ರಾಜಘಟ್ಟ ದೊಡ್ಡಬಳ್ಳಾಪುರ ತಾಲ್ಲೂಕು ಸಂಘಕ್ಕೆ ಕಲಂ 31(1) ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ಸಂ: ಎಆರ್ 47/ಚುನಾವಣೆ/15/2005-06 ದಿನಾಂಕ:15.2.2006.
2. ಕಾರ್ಯದರ್ಶಿ ರಾಜಘಟ್ಟ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ ರಾಜಘಟ್ಟ ದೊಡ್ಡಬಳ್ಳಾಪುರ ತಾಲ್ಲೂಕು ಇವರ ಪತ್ರ ದಿನಾಂಕ:16.3.2006.

**ಪ್ರಸ್ತಾವನೆ:**

ರಾಜಘಟ್ಟ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ ರಾಜಘಟ್ಟ ದೊಡ್ಡಬಳ್ಳಾಪುರ ತಾಲ್ಲೂಕು ಈ ಬ್ಯಾಂಕಿಗೆ 2006-07 ರಿಂದ 2010-11ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿ ನಡೆಸಲು ಚುನಾವಣಾಧಿಕಾರಿಯನ್ನು ಉಲ್ಲೇಖಿತ (1) ರಡಿ ನೇಮಿಸಲಾಗಿತ್ತು. ಸದರಿ ಸಂಘದ ಕಾರ್ಯದರ್ಶಿಯು ಅನಾರೋಗ್ಯ ನಿಮಿತ್ತ ವೈದ್ಯರ ಸಲಹೆ ಮೇರೆಗೆ ಶಸ್ತ್ರಚಿಕಿತ್ಸೆಗೆ ಒಳಗಾಗಿ ವಿಶ್ರಾಂತಿ ಪಡೆಯುತ್ತಿರುವುದಾಗಿ ಉಲ್ಲೇಖಿತ (2)ರಡಿ ಈ ಕಛೇರಿಗೆ ಪತ್ರ ಬರೆಯುತ್ತಾ ಸಂಘದಲ್ಲಿ ಅನ್ಯ ಸಿಬ್ಬಂದಿ ಯಾರೂ ಇಲ್ಲದೇ ಇರುವುದರಿಂದ ಚುನಾವಣಾ ಕಾರ್ಯಗಳನ್ನು ಜರುಗಿಸಲು ತೊಂದರೆ ಉಂಟಾಗಿರುವುದಾಗಿ ತಿಳಿಸಿರುತ್ತಾರೆ. ಸಂಘದ ಆಡಳಿತ ಮಂಡಳಿಯಲ್ಲಿ ಶೂನ್ಯ ಉಂಟಾಗಿರುವುದರಿಂದ ಕಲಂ 31(1)ರಡಿ ಸದರಿ ಸಂಘಕ್ಕೆ ವಿಶೇಷಾಧಿಕಾರಿಯ ನೇಮಕ ಅವಶ್ಯಕ ಎಂದು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಎಆರ್-47/ವಿ.ನೇ/3/2006-07, ದಿನಾಂಕ: 1ನೇ ಏಪ್ರಿಲ್ 2006**

ಹಿದಾಯತ್ ಉಲ್ಲಾಖಾನ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿ.ಎಂ.ಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ: 21.11.2001ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜಘಟ್ಟ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ ರಾಜಘಟ್ಟ ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘಕ್ಕೆ ವಿಶೇಷಾಧಿಕಾರಿಗಳನ್ನಾಗಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ (ನಿ) ದೊಡ್ಡಬಳ್ಳಾಪುರ ಶಾಖೆಯ ಮೇಲ್ವಿಚಾರಕರಾದ ಶ್ರೀ ಕೆಂಪೇಗೌಡ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೂ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಉಪ ನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ಮತ್ತು ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು ವಿಶೇಷಾಧಿಕಾರಿಗಳ ಅಧಿಕಾರವಾಧಿಯು ಆಡಳಿತ ಮಂಡಳಿಗೆ ಅಧಿಕಾರ ವಹಿಸಿ ಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ: 1ನೇ ಏಪ್ರಿಲ್ 2006 ರಂದು ಹೊರಡಿಸಿರುತ್ತೇನೆ.

**ಹಿದಾಯತ್ ಉಲ್ಲಾ ಖಾನ್**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ.

ಪಿ.ಆರ್. 865

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ

**ವಿಷಯ:** ತಂಬೇನಹಳ್ಳಿ ಹಾ.ಉ.ಸ.ಸಂ.(ನಿ) ದೊಡ್ಡಬಳ್ಳಾಪುರ ತಾಲ್ಲೂಕು ಸಂಘಕ್ಕೆ ಕಲಂ 31(1) ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಆದೇಶ ಸಂ: ಎಆರ್ 47/ಚುನಾವಣೆ/15/2005-06 ದಿನಾಂಕ:15.2.2006.

2. ಚುನಾವಣಾಧಿಕಾರಿ, ತಂಬೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ ಇವರ ಪತ್ರ ದಿನಾಂಕ:20.3.2006.

**ಪ್ರಸ್ತಾವನೆ:**

ತಂಬೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘಕ್ಕೆ 2006-07 ರಿಂದ 2010-11 ಸಾಲುಗಳ ಅವಧಿಗೆ ಆಡಳಿತ ಮಂಡಳಿಗೆ ಚುನಾವಣೆ ಜರುಗಿಸಲು ಉಲ್ಲೇಖಿತ 1 ರಡಿ ಆದೇಶಿಸಲಾಗಿದ್ದು, ಸದರಿ ಸಂಘದ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದ ಕಾರಣ ಚುನಾವಣೆಯನ್ನು ಜರುಗಿಸಲು ಸಾಧ್ಯವಾಗುವುದಿಲ್ಲವೆಂದು ಆಡಳಿತ ಮಂಡಳಿಯವರು ತೀರ್ಮಾನಿಸಿ ಚುನಾವಣೆ ನಡೆಸಲು ಕಾಲಾವಕಾಶ ನೀಡಲು ಕೋರಿರುತ್ತಾರೆ. ಎಂದು ಚುನಾವಣಾಧಿಕಾರಿಗಳು ಉಲ್ಲೇಖಿತ (2) ರಡಿ ಈ ಕಛೇರಿಗೆ ವರದಿ ಮಾಡಿರುತ್ತಾರೆ. ಆಡಳಿತ ಮಂಡಳಿಯ ಅವಧಿಯು ದಿನಾಂಕ: 31.3.2006ಕ್ಕೆ ಕೊನೆಗೊಂಡು ಶೂನ್ಯ ಉಂಟಾಗಿರುವುದರಿಂದ ಕಲಂ 31(1)ರಡಿ ಸದರಿ ಸಂಘಕ್ಕೆ ವಿಶೇಷಾಧಿಕಾರಿಯ ನೇಮಕ ಅವಶ್ಯಕ ಎಂದು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

### ಆದೇಶ ಸಂಖ್ಯೆ: ಎಆರ್-47/ವಿ.ನೇ/4/2006-07, ದಿನಾಂಕ: 1ನೇ ಏಪ್ರಿಲ್ 2006

ಹಿದಾಯತ್ ಉಲ್ಲಾಖಾನ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿ.ಎಂ.ಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ: 21.11.2001ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ತಂಬೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ದೊಡ್ಡಬಳ್ಳಾಪುರ ತಾ: ಈ ಸಂಘಕ್ಕೆ ವಿಶೇಷಾಧಿಕಾರಿಗಳನ್ನಾಗಿ ಮಾರ್ಗ ವಿಸ್ತರಣಾಧಿಕಾರಿಗಳು ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ದೊಡ್ಡಬಳ್ಳಾಪುರ ಶಿಬಿರ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೂ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಉಪ ನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು ವಿಶೇಷಾಧಿಕಾರಿಗಳ ಅಧಿಕಾರವಾಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿ ಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ: 1ನೇ ಏಪ್ರಿಲ್ 2006 ರಂದು ಹೊರಡಿಸಿರುತ್ತೇನೆ.

**ಹಿದಾಯತ್ ಉಲ್ಲಾ ಖಾನ್**

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ.

ಪಿ.ಆರ್. 866

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ

**ವಿಷಯ:** ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ ಎಸ್.ಎಸ್. ಘಾಟಿ ದೊಡ್ಡಬಳ್ಳಾಪುರ ತಾಲ್ಲೂಕು ಸಂಘಕ್ಕೆ ಕಲಂ 31(1) ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಆದೇಶ ಸಂ: ಎಆರ್ 47/ಚುನಾವಣೆ/15/2005-06 ದಿನಾಂಕ:15.2.2006.

2. ಕಾರ್ಯದರ್ಶಿ, ವ್ಯವಸಾಯ ಸೇವಾ ಸಹಕಾರ ಸಂಘ ನಿ ಎಸ್.ಎಸ್. ಘಾಟಿ ದೊಡ್ಡಬಳ್ಳಾಪುರ ತಾಲ್ಲೂಕು ಇವರ ಪತ್ರ ದಿನಾಂಕ:9.3.2006.

**ಪ್ರಸ್ತಾವನೆ:**

ವ್ಯವಸಾಯ ಸೇವಾ ಸಹಕಾರ ಸಂಘ ನಿ ಎಸ್.ಎಸ್. ಘಾಟಿ ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ 2006-07 ರಿಂದ 2010-11ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿ ನಡೆಸಲು ಚುನಾವಣಾಧಿಕಾರಿಯನ್ನು ಉಲ್ಲೇಖಿತ (1)ರಡಿ ನೇಮಿಸಲಾಗಿತ್ತು. ಉಲ್ಲೇಖಿತ (2) ರಡಿ ಸದರಿ ಬ್ಯಾಂಕಿನ ಕಾರ್ಯದರ್ಶಿ ಈ ಕಛೇರಿಗೆ ಪತ್ರ ಬರೆಯುತ್ತಾ ಸಂಘದ ಆರ್ಥಿಕ ಪರಿಸ್ಥಿತಿ ಸರಿ ಇಲ್ಲದ ಕಾರಣದಿಂದ ಹಣಕಾಸಿನ ವ್ಯವಸ್ಥೆ ಮಾಡುವವರೆಗೆ ಚುನಾವಣೆ ಜರುಗಿಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ. ಸದರಿ ಸಂಘದ ಆಡಳಿತದಲ್ಲಿ ಶೂನ್ಯ ಉಂಟಾಗಿರುವುದರಿಂದ ಕಲಂ 31(1)ರಡಿ ಸದರಿ ಸಂಘಕ್ಕೆ ವಿಶೇಷಾಧಿಕಾರಿಯ ನೇಮಕ ಅವಶ್ಯಕ ಎಂದು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

### ಆದೇಶ ಸಂಖ್ಯೆ: ಎಆರ್-47/ವಿ.ನೇ/6/2006-07, ದಿನಾಂಕ: 1ನೇ ಏಪ್ರಿಲ್ 2006

ಹಿದಾಯತ್ ಉಲ್ಲಾಖಾನ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿ.ಎಂ.ಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ: 21.11.2001ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ವ್ಯವಸಾಯ ಸೇವಾ ಸಹಕಾರ ಸಂಘ ನಿ ಎಸ್.ಎಸ್. ಘಾಟಿ, ದೊಡ್ಡಬಳ್ಳಾಪುರ ತಾ: ಈ ಸಂಘಕ್ಕೆ ವಿಶೇಷಾಧಿಕಾರಿಗಳನ್ನಾಗಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ (ನಿ) ದೊಡ್ಡಬಳ್ಳಾಪುರ ಶಾಖೆಯ ಮೇಲ್ವಿಚಾರಕರಾದ ಶ್ರೀ ಕೆಂಪೇಗೌಡ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೂ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಉಪ ನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ

